ಕರ್ನಾಟಕ ಸರಕಾರ





ಸಂಕೀರ್ಣ



# ಹರಿಭಕ್ತಿಸಾರ ಹಿನಿ

ಜಿ.ವರದರಾಜ ರಾವ್





ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ 98

# ಹರಿಭಕ್ತಿ ವಾಹಿನಿ

(ಹರಿದಾಸರ ಕೃತಿಗಳ ಸಂಕಲನ)

ಸಂಪಾದಕರು

ಡಾ. ಜಿ. ವರದರಾಜ ರಾವ್



ವಿಶ್ವ ಕನ್ನಡ ಸಮ್ಮೇಳನ

14-3 ಎ, ನೃಪತುಂಗ ರಸ್ತೆ

ಬೆಂಗಳೂರು-560 002

ಆರ್. ಗುಂಡೂರಾವ್
ಮುಖ್ಯಮಂತ್ರಿ




ವಿಧಾನಸೌಧ
ಬೆಂಗಳೂರು

ದಿನಾಂಕ: ೧೮-೯-೮೨

## ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಯಶಸ್ವಿಯಾಗಲು ಇದರ

ಸವಿ ನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ; ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರಶೀಲ ಸಾಹಿತ್ಯ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯ ವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆ ಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನ ಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್

ಮುಖ್ಯಮಂತ್ರಿ

# ಒಳಪಿಡಿ

## ಅರಿಕೆ

ಕನ್ನಡ ಹರಿದಾಸ ಸಾಹಿತ್ಯವನ್ನು ಸಾಂಪ್ರದಾಯಿಕ ದೃಷ್ಟಿಯಿಂದ ತಾರತಮ್ಯ ತತ್ವಕ್ಕೆ ಅನುಸಾರವಾಗಿ ಸಿದ್ಧಪಡಿಸಿರುವ ಅನೇಕ ಸಂಕಲನಗಳು ಈಗಾಗಲೇ ಪ್ರಕಟವಾಗಿವೆ. ಆದರೆ, ಹರಿದಾಸ ಸಾಹಿತ್ಯದಲ್ಲಿ ವಿದಿತವಾಗುವ ಭಾವವೈವಿಧ್ಯವನ್ನು ಮಾತ್ರವೇ ಲಕ್ಷ್ಯದಲ್ಲಿಟ್ಟುಕೊಂಡು ದಾಸರ ರಚನೆಗಳನ್ನು ವಿಭಜನೆ ಮಾಡಿರುವ ಸಂಕಲನಗಳಲ್ಲಿ ಶ್ರೀ ರಂಗನಾಥ ದಿವಾಕರರ "ಹರಿಭಕ್ತಿ ಸುಧೆ"ಯೇ (೧೯೩೭) ಬಹಳ ಹಳೆಯದೂ, ಅಮೂಲ್ಯವೂ ಆದುದು ಎಂದು ನನ್ನ ಎಣಿಕೆ. ಪ್ರಕೃತದಲ್ಲಿ, ಸಮಗ್ರ ಹರಿದಾಸ ಸಾಹಿತ್ಯವನ್ನು ಅಧ್ಯಯನ ದೃಷ್ಟಿಯಿಂದ, ಬೇರೆ ಬೇರೆ ದೃಷ್ಟಿಕೋನಗಳಿಂದ ಪರಿಶೀಲಿಸಿ ಇಲ್ಲಿ ವಿಂಗಡಿಸಲಾಗಿದೆ. ಅಪರೋಕ್ಷಜ್ಞಾನಿಗಳಾದ ಹರಿದಾಸರ ಭಕ್ತಿ ಕೈಂಕರ್ಯ ಹೇಗೆ ಕುಡಿಯೊಡೆದು ಕ್ರಮಕ್ರಮವಾಗಿ ಪ್ರವರ್ಧಿಸಿ ಪ್ರಕಾಶಕ್ಕೆ ಬರುವುದೆನ್ನುವುದನ್ನು ಗಮನದಲ್ಲಿಟ್ಟುಕೊಂಡು ಆತ್ಮನಿವೇದನೆ, ಅಪರೋಕ್ಷಾನುಭವ ಮತ್ತು ಆರಾಧನ ವೈವಿಧ್ಯಗಳೆಂಬ ವಿಭಾಗಗಳನ್ನು ಅಣಿಗೊಳಿಸಿದೆ. ಭಕ್ತ–ಭಗವಂತರ ಸಂಬಂಧವನ್ನು ವಿಶ್ಲೇಷಿಸುವಲ್ಲಿ, ಚೈತನ್ಯಪಂಥದವರ ಪಂಚವಿಧ ಭಾವಗಳ ಪೃಥಕ್ಕರಣೆ ಹೆಚ್ಚು ಪರಿಣಾಮಕಾರಿಯಾಗಿ ತೋರಿಬಂದುದರಿಂದ, ಆ ಸಂವಿಧಾನವನ್ನು ಸ್ವಲ್ಪಮಟ್ಟಿಗೆ ಮಾರ್ಪಡಿಸಿಕೊಂಡು, ಇಲ್ಲಿ ಅನುಸರಿಸಿದೆ, ಹರಿದಾಸರ ಕೃತಿಗಳಲ್ಲಿ ಹುದುಗಿರುವ ದ್ವೈತ ಸಿದ್ಧಾಂತದ ಪ್ರಮುಖವಾದ ಪ್ರಮೇಯಗಳನ್ನೂ, ಈ ಹರಿಭಕ್ತರು ದೇವತೆಗಳಿಂದ ಮೊದಲ್ಗೊಂಡು ತೀರ್ಥಕ್ಷೇತ್ರದವರೆಗೆ ಮಾಡಿರುವ ಸ್ತುತಿಗಳನ್ನೂ ಇಲ್ಲಿ ಪರಿಚಯ ಮಾಡಿಕೊಟ್ಟಿದೆ. ಈ ದೈವಭಕ್ತರು ಊರೂರು ಕೇರಿಕೇರಿಗಳಲ್ಲಿ ಸಂಚರಿಸಿ, ನಿತ್ಯ ಜೀವನದ ಓರೆಕೋರೆಗಳನ್ನು ಹೇಗೆ ಮನಗಂಡಿರುವರೆನ್ನುವುದನ್ನೂ, ಅವರು ಮಾನವ ಸಮು

ದಾಯದ ಆತ್ಮೋನ್ನತಿಗಾಗಿ ಹೇಳಿರುವ ಹಿತೋಕ್ತಿಗಳನ್ನೂ, ನೀಡಿರುವ ಸಾರ್ವತ್ರಿಕ ಸಂದೇಶವನ್ನೂ ಬೇರೆಬೇರೆಯಾಗಿ ಸಂಕಲಿಸಿದೆ. ಹರಿದಾಸ ಸಾಹಿತ್ಯದ ಆದ್ಯ ಪ್ರವರ್ತಕರಾದ ಶ್ರೀಪಾದರಾಜರನ್ನು (ಕ್ರಿ. ಶ. ೧೪೫೦) ಮೊದಲ್ಗೊಂಡು ಶ್ರೀದವಿಠಲರವರೆಗಿನ (ಕ್ರಿ.ಶ. ೧೮೦೦) ಕೃತಿಗಳನ್ನು ಪರಿಮಿತಿಯಾಗಿ ಇಟ್ಟುಕೊಂಡು ಈ ಸಂಕಲನವನ್ನು ಸಿದ್ಧಪಡಿಸಿದೆ. ಹರಿದಾಸ ಸಾಹಿತ್ಯದ ಪ್ರಮುಖ ಪ್ರಕಾರಗಳಾದ ಕೀರ್ತನೆ, ಉಗಾಭೋಗ, ಸುಳಾದಿ ಮತ್ತು ತತ್ತ್ವಸುವ್ವಾಲಿಗಳನ್ನು ಇಲ್ಲಿ ಆಯ್ದುಕೊಂಡಿದೆ. ಸುಳಾದಿಗಳು ಬಹು ನಿಡಿದಾದ ಪ್ರಕಾರವಾದುದರಿಂದ, ಕೆಲವು ಸಂದರ್ಭಗಳಲ್ಲಿ ಸೂಕ್ತವಾದ ಭಾಗವನ್ನು ಮಾತ್ರ ಉದ್ಧರಿಸಿದೆ.

ಇತ್ತೀಚೆಗೆ ಪ್ರಕಟವಾಗಿರುವ ಕೆಲವು ಹರಿದಾಸರ ರಚನೆಗಳ ಪರಿಷ್ಕೃತ ಪಾಠಗಳನ್ನು ಸಂದರ್ಭೋಚಿತವಾಗಿ ಮಾತ್ರ ಸ್ವೀಕರಿಸಿದೆ. ಹರಿದಾಸರ ರಚನೆಗಳನ್ನು ಹಾಡುವಲ್ಲಿ ಈವರೆಗೂ ಯಾವ ಏಕಸೂತ್ರತೆಯೂ ಕಾಣದಿರುವುದರಿಂದ ಇಲ್ಲಿ ಕೃತಿಗಳಿಗೆ ರಾಗ ತಾಳಗಳ ನಿರ್ದೇಶನವನ್ನು ಸೂಚಿಸಿಲ್ಲ. ಈ ಸಮಸ್ಯೆಯನ್ನು ನಮ್ಮ ಸಂಗೀತ ತಜ್ಞರು ಪರಿಹರಿಸಬೇಕಾಗಿದೆ.

ಕರ್ನಾಟಕ ಸರ್ಕಾರದವರು ಪ್ರಥಮ ವಿಶ್ವಕನ್ನಡ ಸಮ್ಮೇಳನವನ್ನು ನಡೆಸುತ್ತಿರುವ ಸಂದರ್ಭದಲ್ಲಿ, ಹರಿದಾಸರ ರಚನೆಗಳ ಈ ಪ್ರಾತಿನಿಧಿಕ ಸಂಕಲನವೊಂದನ್ನು ಸಿದ್ಧಪಡಿಸುವ ಸದವಕಾಶವನ್ನು ನನಗೆ ಒದಗಿಸಿಕೊಟ್ಟಿದ್ದಕ್ಕಾಗಿ ಈ ಸಮ್ಮೇಳನದ ಕಾರ್ಯನಿರ್ವಾಹಕ ಮಂಡಲಿಗೂ, ಆ ಮೂಲಕ ಕರ್ನಾಟಕ ಸರ್ಕಾರಕ್ಕೂ ನಾನು ತುಂಬ ಋಣಿಯಾಗಿದ್ದೇನೆ. ಇದನ್ನು ಮುದ್ರಿಸಿದ "ಅಶ್ವಥ್ ಪ್ರಿಂಟರ್ಸ್" ಅವರಿಗೆ ನನ್ನ ಕೃತಜ್ಞತೆಗಳು.

ಮೈಸೂರು
೧೦-೭-೧೯೮೫ — ಜಿ. ವರದರಾಜ ರಾವ್

# ಗುರುವಂದನ

ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ
ನಮಃ ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮಃ ॥

ತಪೋ ವಿದ್ಯಾ ವಿರಕ್ತ್ಯಾದಿ ಸದ್ಗುಣಾಘಾಕರನಹಂ
ವಾದಿರಾಜಗುರುಂ ವಂದೇ ಹಯಗ್ರೀವ ದಯಾಶ್ರಯಂ॥

ಜ್ಞಾನವೈರಾಗ್ಯ ಸಂಪನ್ನಂ ಭಕ್ತಿಮಾರ್ಗ ಪ್ರವರ್ತಕಂ
ಪುರಂದರ ಗುರುಂ ವಂದೇ ದಾಸಶ್ರೇಷ್ಠಂ ದಯಾನಿಧಿಂ ॥

ಅಜ್ಞಾನ ತಿಮಿರಚ್ಛೇದಂ ಬುದ್ಧಿಸಂಪತ್ಪ್ರದಾಯಕಂ
ವಿಜ್ಞಾನ ವಿಮಲಂ ಶಾಂತಂ ವಿಜಯಾಖ್ಯ ಗುರುಂ ಭಜೇ ॥

ಜಲಜೇಷ್ಟನಿಭಾಕಾರಂ ಜಗದೀಶಪದಾಶ್ರಯಮ್
ಜಗಶೀತಲ ವಿಖ್ಯಾತಂ ಜಗನ್ನಾಥ ಗುರುಂಭಜೇ ॥

# ಹರಿದಾಸ ಸಾಹಿತ್ಯ ಪರಿಚಯ

ಧ್ಯಾನವು ಕೃತಯುಗದಿ। ಯಜನಯಜ್ಞವು ತ್ರೇತಾಯುಗದಿ
ದಾನವಾಂತಕನ ದೇವತಾರ್ಚನೆ ದ್ವಾಪರಯುಗದಿ
ಆ ಮಾನವರಿಗೆಷ್ಟು ಫಲವೊ ಅಷ್ಟು ಫಲವು
ಕಲಿಯುಗದಿ ದಾನದಲಿ ಕೇಶವಯೆನಲು
ಕೈಗೊಡವನು ರಂಗವಿಠಲ.

ಕನ್ನಡ ನಾಡಿನ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಭಕ್ತಿಯ ಮೇಲ್ಮೆಯನ್ನು ಮೆರೆಸಿದವರಲ್ಲಿ ಕ್ರಿ. ಶ. ಹನ್ನೆರಡನೆಯ ಶತಮಾನದ ಶಿವಶರಣರು ಹೇಗೆ ಸ್ಮರಣೀಯರೋ ಹಾಗೆಯೇ ಕ್ರಿ. ಶ. ಹದಿನೈದನೆಯ ಶತಮಾನದಲ್ಲಿ ವೈದಿಕ ಧರ್ಮದ ಸಂದೇಶವನ್ನು ಕನ್ನಡದಲ್ಲಿ ಸಾರಿ ಹೇಳಿದ ಹರಿದಾಸರು ಎಂದೆಂದಿಗೂ ಅಭಿನಂದನಾರ್ಹರು. ಶ್ರೀಮಧ್ವಾಚಾರ್ಯರ ಪಟ್ಟಶಿಷ್ಯರಲ್ಲಿ ಒಬ್ಬರಾದ ಶ್ರೀ ಪದ್ಮನಾಭತೀರ್ಥರ ಮಠದ ಪರಂಪರೆಯಲ್ಲಿ ಪೀಠವನ್ನು ಅಲಂಕರಿಸಿದ ಶ್ರೀ ಶ್ರೀಪಾದರಾಜರು ದೇವರ ಪೂಜಾಕಾಲದಲ್ಲಿ ಆಚರಣೆಗೆ ತಂದ ಕನ್ನಡ ಕೀರ್ತನೆಯ ಕೈಂಕರ್ಯವೇ ಕನ್ನಡ ಹರಿದಾಸ ಸಾಹಿತ್ಯ ನಿರ್ಮಾಣಕ್ಕೆ ನಾಂದಿಯಹಾಯಿತೆನ್ನಬಹುದು. ಶ್ರೀಪಾದರಾಜರು, ತಮ್ಮ ಗುರುಗಳಾದ ಶ್ರೀ ಸ್ವರ್ಣವರ್ಣತೀರ್ಥರ ಬಳಿಯಲ್ಲಿ ಶ್ರೀರಂಗದಲ್ಲಿದ್ದಾಗ ಅಲ್ಲಿ ಬಳಕೆಯಲ್ಲಿದ್ದ ತಮಿಳಿನ ಆಳ್ವಾರರ ಪ್ರಬಂಧಗಳನ್ನು ಕೇಳಿದುದರಿಂದಲೂ, ಅವರು ಮುಳುಬಾಗಿಲಿಗೆ ಬಂದು, ನರಸಿಂಹತೀರ್ಥದ ಪವಿತ್ರ ಸಾನ್ನಿಧ್ಯದಲ್ಲಿ ತಮ್ಮ ಮಠವನ್ನು ಸ್ಥಾಪಿಸಿ, ಅಲ್ಲಿ ನಿಂತ ಬಳಿಕ, ಆವೇಳೆಗಾಗಲೆ ಕನ್ನಡದಲ್ಲಿ ಪ್ರಚಾರದಲ್ಲಿದ್ದ

ಶಿವಶರಣರ ವಚನಗಳನ್ನು ಕಂಡುದರಿಂದಲೂ. ಭಕ್ತಿ ಪ್ರತಿಪಾದನೆಯಲ್ಲಿ ಮಾತೃಭಾಷೆಯ ಮಾಧ್ಯಮ ಎಷ್ಟು ಮಿಗಿಲಾದುದೆನ್ನುವುದರಲ್ಲಿ ಮನಗಂಡಿರಬೇಕು. ಇವುಗಳಲ್ಲದೆ, ವಿಷ್ಣುಪುರಾಣದಲ್ಲಿ ಉಕ್ತವಾಗಿರುವ "ಧ್ಯಾಯನ್ ಕೃತೇಯಜನ್ ಯಜ್ಞೈಃ ತ್ರೇತಾಯಾಂ, ದ್ವಾಪರೇಽರ್ಚಯನ್। ಯದಾಪ್ನೋತಿ ತದಾಪ್ನೋತಿ ಕಲಾಸಂಕೀರ್ತ್ಯ ಕೇಶವಂ" (ವಿಷ್ಣುಪುರಾಣಂ, ಅಂಶ vi, ಅಧ್ಯಾಯ ೨, ಶ್ಲೋಕ ೧೭) ಎಂಬ ಶ್ಲೋಕದಲ್ಲಿ ಕಲಿಯುಗದಲ್ಲಿ ಸಂಕೀರ್ತನೆಗೆ ದೊರೆತಿರುವ ಸ್ಥಾನವನ್ನು ತಿಳಿದು, ಅದೇ ಮೇರೆಗೆ ತಾವೂ ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಲು ತೊಡಗಿದರೆಂದು ತೋರುತ್ತದೆ. ಅವರ ಈ ಕೀರ್ತನ ಕೈಂಕರ್ಯಕ್ಕೆ ಪ್ರಕೃತ ಶ್ಲೋಕದಿಂದ ಎಷ್ಟು ಪ್ರೇರಣೆ ದೊರತಿರಬಹುದು ಎನ್ನುವುದಕ್ಕೆ ಈ ಶ್ಲೋಕವನ್ನು ಅವಲಂಬಿಸಿ ಅವರು ರಚಿಸಿರುವ, ಮೇಲೆ ಉದಾಹರಿಸಿರುವ ಉಗಾಭೋಗವೇ ಉತ್ತಮೋತ್ತಮ ಸಾಕ್ಷಿ. ಶ್ರೀಪಾದರಾಜರ ಈ ಶ್ರೀಕಾರದಿಂದ ಮೊದಲಾದ ಹರಿದಾಸ ಸಾಹಿತ್ಯ ಕ್ರಮಕ್ರಮವಾಗಿ ಹೇಗೆ ಹಬ್ಬಿ ಬೆಳೆಯಿತೆಂಬುದರ ಚರಿತ್ರೆ ಸಾಕಷ್ಟು ಸ್ವಾರಸ್ಯವೂ ವಿಸ್ತೃತವೂ ಆದದ್ದು.

ಮುಳುಬಾಗಿಲಿನಲ್ಲಿದ್ದ ಶ್ರೀಪಾದರಾಜರ ಬಳಿಗೆ ವಿದ್ಯಾರ್ಜನೆಗಾಗಿ ಬಂದವರಲ್ಲಿ ಶ್ರೀ ವ್ಯಾಸರಾಜರ ಪ್ರಖ್ಯಾತಿ ಹೇಳತೀರದು. ಈ ಗುರುಶಿಷ್ಯರ ಪರಸ್ಪರ ಪ್ರೀತಿ, ಅಭಿಮಾನಗಳು ಇತಿಹಾಸ ಪ್ರಸಿದ್ಧವಾದುದು. "ಮಹಿಮೆ ಸಾಲದೆ ಇಷ್ಟೇ ಮಹಿಮೆ ಸಾಲದೆ, ಅತಿಶಯನನ ಒಲುಮೆಯಿಂದ ಮಹಿಮೆಯಳೊಮ್ಮ ಶ್ರೀಪಾದರಾಯರ" ಎಂಬುದಾಗಿ ಶ್ರೀ ವ್ಯಾಸರಾಯರು ತಮ್ಮ ಗುರುಗಳ ಮಹಿಮಾತಿಶಯಗಳನ್ನು ಕೊಂಡಾಡಿದರೆ, ಶ್ರೀಪಾದರಾಜರು. "ಸಾಸಿರ ಜಿಹ್ವೆಗಳುಳ್ಳ ಶೇಷನೇ ಕೊಂಡಾಡಬೇಕು ವ್ಯಾಸಮುನಿರಾಯರ ಸಂನ್ಯಾಸದಿರವ" ಎಂದು ಶ್ರೀವ್ಯಾಸರಾಯರನ್ನು ಅತ್ಯಂತ ಹೆಮ್ಮೆಯಿಂದ ಹೊಗಳಿರುತ್ತಾರೆ. ಶ್ರೀವ್ಯಾಸರಾಯರು ಶ್ರೀಪಾದರಾಜರಲ್ಲಿ ದ್ವೈತ ಸಿದ್ಧಾಂತವನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿದುದಷ್ಟೇ ಅಲ್ಲದೆ, ಶ್ರೀಪಾದರಾಜರು ಕೈಕೊಂಡಿದ್ದ ಕನ್ನಡ ಕೀರ್ತನ ಕೈಂಕರ್ಯಕ್ಕೆ ತಮ್ಮ ದನಿಯನ್ನು ಕೂಡಿಸಿದರು. ಗುರುಗಳ ಮೇಲುಪಂಕ್ತಿಯನ್ನೇ ಅನುಸರಿಸಿ ಅತ್ಯಂತ ರಸವತ್ತಾದ ಕೀರ್ತನೆಗಳನ್ನು ರಚಿಸಿದರು. ಅಷ್ಟಕ್ಕೇ ತೃಪ್ತರಾಗದೆ

ಈ ಪದ್ಧತಿ ಪುಷ್ಟಿಗೊಂಡು ಮುಂದುವರಿಯುವ ಸಲುವಾಗಿ ಹರಿದಾಸರ ವೃಂದವೊಂದನ್ನು ವ್ಯವಸ್ಥೆಗೊಳಿಸಿದರು. ಈ ದಾಸಕೂಟದ ಅಗ್ರಗಣ್ಯರಲ್ಲಿ ಪುರಂದರದಾಸರು ಒಬ್ಬರಾದರೆ, ಕನಕದಾಸರು ಮತ್ತೊಬ್ಬರಾಗಿರುತ್ತಾರೆ. ಈ ಪೂರ್ವಕಾಲದಲ್ಲಿಯೇ ಶ್ರೀ ವ್ಯಾಸರಾಯರ ಶಿಷ್ಯ ಪರಿವಾರದಲ್ಲಿ ಒಬ್ಬರಾಗಿದ್ದ ಸ್ವಾದಿ ಸಂಸ್ಥಾನದ ಯತಿವರ್ಯರಾದ ಶ್ರೀವಾದಿರಾಜರು ಈ ಕೀರ್ತನ ಸಂಪ್ರದಾಯಕ್ಕೆ ತಾವೂ ಪಾರುಹೋಗಿ ಅನೇಕ ಕನ್ನಡ ಕೃತಿಗಳನ್ನು ರಚಿಸಿ ಹರಿದಾಸ ಸಾಹಿತ್ಯ ಹಿರಿಮೆಯನ್ನು ಮತ್ತಷ್ಟು ಬೆಳಗಿದರು. ಶ್ರೀಪಾದ ರಾಯರು ಮತ್ತು ಶ್ರೀ ವ್ಯಾಸರಾಯರ ರಚನೆಗಳಲ್ಲಿ ಅವರ ಭಗವದನುಸಂಧಾನ ಮತ್ತು ಶ್ರೀಮದ್ಭಾಗವತದಲ್ಲಿ ಉಕ್ತವಾಗಿರುವ ಶ್ರೀಕೃಷ್ಣನ ಲೀಲಾ ವಿನೋದಗಳು ಪ್ರಧಾನವಾಗಿ ಕಂಡುಬಂದರೆ, ಶ್ರೀಪಾದರಾಜರ ರಚನೆಗಳಲ್ಲಿ ದ್ವೈತಸಿದ್ಧಾಂತದ ಪ್ರಮುಖ ಪ್ರಮೇಯಗಳನ್ನೆಲ್ಲ ತಿಳಿಗನ್ನಡದಲ್ಲಿ ಪ್ರತಿಪಾದಿಸಿರುವುದನ್ನು ನಾವು ಕಾಣಬಲ್ಲೆವು. ಪುರಂದರದಾಸರ ಪ್ರಾಸಾದಿಕ ವಾಣಿಯ ಬಲದಿಂದ ಹರಿದಾಸ ಸಾಹಿತ್ಯದ ಕ್ಷಿತಿಜ ಮತ್ತಷ್ಟು ವಿಸ್ತರಿಸಿ, ಅದು ವೈಷ್ಣವ ಭಕ್ತಿಯ ತುಂಬುಹೊನಲಾದಿ ಪ್ರವಹಿಸಿದುದಲ್ಲದೆ, ಜನಜೀವನದ ಓರೆಕೋರೆಗಳನ್ನು ಪ್ರತಿಬಿಂಬಿಸುವ ಮತ್ತು ಸಾತ್ವಿಕ ಜೀವನದ ರೂಪುರೇಖೆಗಳನ್ನು ನಿರೂಪಿಸುವ ಉತ್ತಮ ಮಾಧ್ಯಮವೂ ಆಯಿತು. ಪುರಂದರ ದಾಸರ ಈ ಅಪೂರ್ವ ಸಿದ್ಧಿಯನ್ನು ಮನಗಂಡ ಶ್ರೀವ್ಯಾಸರಾಯರು ಸಂತುಷ್ಟರಾಗಿ ಅವರನ್ನು "ದಾಸರೆಂದರೆ ಪುರಂದರ ದಾಸರಯ್ಯ" ಎಂದು ಕೀರ್ತನೆಯ ಮೂಲಕವೇ ಹೊಗಳಿರುವುದು ಗಮನಾರ್ಹವಾದುದು. ಶ್ರೀ ವ್ಯಾಸರಾಯರ ಪರಮಾನುಗ್ರಹಕ್ಕೆ ಪಾತ್ರರಾದ ಕನಕದಾಸರು ಸಲ್ಲಿಸಿರುವ ಸೇವೆಯೂ ಇಷ್ಟೇ ಅಮೂಲ್ಯವಾದದ್ದು. ಅವರ ಕೀರ್ತನೆಗಳಲ್ಲಿ ವಿದಿತವಾಗುವ ಮುಚ್ಚುಮರೆಯಿಲ್ಲದ ಕೆಚ್ಚಿನ ನುಡಿಗಳು ಎಂಥವರನ್ನಾದರೂ ಬಡಿದೆಬ್ಬಿಸುವಂತಿವೆ. ಕನಕದಾಸರು ಕೀರ್ತನಕಾರರು ಮಾತ್ರವೇ ಅಲ್ಲದೆ, ಉತ್ತಮ ಕವಿಗಳೂ ಹೌದು. ವಿಜಯನಗರದ ವೈಭವದ ಉಚ್ಛ್ರಾಯ ಕಾಲದಲ್ಲಿ ಹರಿದಾಸ ಸಾಹಿತ್ಯದ ಮೇಲ್ಮೆಯೂ ಅಷ್ಟೇ ಉಜ್ವಲವಾಗಿ ವಿರಾಜಿಸಿತು. ವಿಜಯ ನಗರದ ಪತನದಿಂದ ಹಿಂದೂಧರ್ಮದ ಕಾಂತಿ ಹೇಗೆ

ಕಳೆಗುಂದದಂತೆ ತೋರಿಬಂದಿತೋ ಅದೇ ಮೇರೆಗೆ ಆ ಸಂಧಿಕಾಲದಲ್ಲಿ ಹರಿದಾಸರವಾಣಿಗೂ ಕೆಲ ಕಾಲದ ಮಟ್ಟಿಗೆ ಗಂಟಲು ಕಟ್ಟಿದಂತಾಯಿತು.

ಆದವಾನಿಯ ನವಾಬನ ಆಡಳಿತಕ್ಕೆ ಒಳಪಟ್ಟಿದ್ದ ಇಂದಿನ ಮಂತ್ರಾಲಯ ಕ್ಷೇತ್ರದಲ್ಲಿ ಶ್ರೀ ರಾಘವೇಂದ್ರ ತೀರ್ಥರ ವೃಂದಾವನವು ಸ್ಥಾಪನೆಯಾದ ಅನತಿ ಕಾಲದಲ್ಲಿಯೇ ಹರಿದಾಸ ಸಾಹಿತ್ಯ ವೃಕ್ಷ ಮತ್ತೊಮ್ಮೆ ಕುಡಿಯೊಡೆಯಲು ಆರಂಭಿಸಿತು. ಚೀಕಲ ಪರಿವೆಯ ಕೂಸೀಮುಗ ದಾಸನು ಪುರಂದರದಾಸರಿಂದ ವಿಜಯವಿಠಲನೆಂಬ ಅಂಕಿತವನ್ನು ಸ್ವಪ್ನದಲ್ಲಿ ಪಡೆದು ವಿಜಯದಾಸರೆಂಬ ಹೆಸರಿನಲ್ಲಿ ಕೀರ್ತನ ಕೈಂಕರ್ಯಕ್ಕೆ ತೊಡಗಿದ ಕ್ಷಣದಿಂದ ಹರಿದಾಸ ಸಾಹಿತ್ಯದ ಪುನರುಜ್ಜೀವನದ ಯುಗ ಮೊದಲಾಯಿತು. ವಿಜಯದಾಸರು ತಮಗಿಂತ ಪೂರ್ವದಲ್ಲಿ ವಿಜಯನಗರದಲ್ಲಿ ಬಾಳಿ ಬದುಕಿದ ಹಿರಿಯ ಹರಿದಾಸರ ಜೀವನವನ್ನು ಹೆಜ್ಜೆ ಹೆಜ್ಜೆಗೂ ಸ್ಮರಿಸಿರುವುದನ್ನು ಅವರ ರಚನೆಗಳಲ್ಲಿ ಮೇಲಿಂದ ಮೇಲೆ ಕಾಣಬಹುದು. ವಿಜಯದಾಸರ ವಾಣಿಯಲ್ಲಿ ಪುರಂದರದಾಸರ ಪ್ರಸನ್ನತೆಯೂ ಶ್ರೀ ವಾದಿರಾಜರ ವೈದುಷ್ಯವೂ ಹಾಸುಹೊಕ್ಕಾಗಿ ಬೆರೆತು ಬರುವುದನ್ನು ಕಂಡಾಗ ಯಾರಿಗಾದರೂ ಬೆರಗಾಗದಿರದು. ಹರಿದಾಸ ಸಾಹಿತ್ಯದ ಈ ಪುನರುತ್ಥಾನ ಯುಗದ ಪ್ರಮುಖ ಹರಿದಾಸರಲ್ಲಿ ಈ ಶಾಸ್ತ್ರ ಮತ್ತು ಸಾಹಿತ್ಯಗಳ ಸಮನ್ವಯವನ್ನು ಉದ್ದಕ್ಕೂ ನಾವು ಕಾಣುತ್ತೇವೆ. ವಿಜಯದಾಸರ ಕೀರ್ತನೆಗಳಲ್ಲಿ ಅವರ ಭಕ್ತಿಸಾರವಶ್ಯವನ್ನು ಕಂಡರೆ, ಅವರ ಸುಳಾದಿಗಳಲ್ಲಿ ದ್ವೈತಸಿದ್ಧಾಂತದ ಅನೇಕ ಗಹನ ವಿಚಾರಗಳನ್ನು ಕಾಣುತ್ತೇವೆ. ವಿಜಯದಾಸರ ಶಿಷ್ಯ ಪ್ರಶಿಷ್ಯರ ಪರಂಪರೆ ಬಹಳ ದೊಡ್ಡದು. ಅವರ ಪ್ರಭಾವಲಯಕ್ಕೆ ಸೇರಿದ ಗೋಪಾಲದಾಸರು, ಜಗನ್ನಾಥದಾಸರು, ಮೋಹನದಾಸರು, ವೇಣುಗೋಪಾಲದಾಸರು ಮೊದಲಾದವರಲ್ಲಿಯೂ ಈ ವಿಶಿಷ್ಟ ಲಕ್ಷಣವನ್ನು ಗುರುತಿಸಬಹುದು. ವಿಜಯದಾಸರ ಬಿಡಿಬಿಡಿಯಾದ ಸುಳಾದಿಗಳ ಸಾರವೇ ಜಗನ್ನಾಥದಾಸರ ಹರಿಕಥಾಮೃತಸಾರದಲ್ಲಿ ಇಡಿಯಾಗಿ ಕಂಡು ಬರುವುದನ್ನು ಗಮನಿಸಿದರೆ ವಿಜಯದಾಸರ ಹಿರಿಮೆಯೇನು ಎನ್ನುವುದು ಸ್ವವಿದಿತವಾಗುತ್ತದೆ. ಹರಿದಾಸ ಸಾಹಿತ್ಯದ ಸುವರ್ಣಯುಗದಲ್ಲಿ ಶ್ರೀ ವ್ಯಾಸರಾಯರು ದಾಸಕೂಟದ ವ್ಯವಸ್ಥೆಗೆ ಹಾಕಿದ ಅಂಕುರ, ವಿಜಯದಾಸರು ಕೈ

ಕೊಂಡ ಪುನರುಜ್ಜೀವನ ಯುಗದಲ್ಲಿ ಹೆಮ್ಮರವಾಗಿ ಬೆಳೆದು ಸಫಲವಾಯಿತು ಎನ್ನಬಹುದು. ಏಕೆಂದರೆ, ವಿಜಯದಾಸರಿಂದ ಮೊದಲಾದ ಹರಿದಾಸ ಪರಂಪರೆ ಶತಶತಮಾನಗಳಲ್ಲಿ ಹಾದು ಇಂದಿನವರೆಗೂ ಜೀವಂತವಾಗಿ ಉಳಿದು ಬಂದಿದೆ. ಹರಿದಾಸರ ವಂಶಾವಳಿಯಲ್ಲಿ ಇನ್ನೂರಕ್ಕೂ ಕಡಿಮೆಯಿಲ್ಲದಷ್ಟು ಹೆಸರುಗಳು ಕೇಳಿಬರುತ್ತವೆ. ಹರಿದಾಸ ಸಾಹಿತ್ಯದ ಪೂರ್ವಾರ್ಧದ ಪ್ರಮುಖರಿಗೆಲ್ಲ ಹಂಪೆ ಕೇಂದ್ರಸ್ಥಾನವೆನಿಸಿದರೆ ಉತ್ತರಾರ್ಧದ ಪೀಳಿಗೆಯವರಿಗೆ ಬಹುಮಟ್ಟಿಗೆ ಮಂತ್ರಾಲಯವೇ ಪ್ರಮುಖವಾದ ಸ್ಫೂರ್ತಿಸ್ಥಾನವಾಯಿತೆನ್ನಬಹುದು. ಈ ಉತ್ತರಾರ್ಧದವರ ರಚನೆಗಳಲ್ಲಿ ದ್ವೈತಸಿದ್ಧಾಂತದ ಪ್ರಮೇಯಗಳ ವಿಚಾರಗಳು ನಿಬಿಡವಾಗಿ ತೋರಿಬಂದುದರಿಂದಲೇ "ಸುಧಾ ಓದಿ ಪದ ಹೇಳು" ಎಂಬ ಗಾದೆ ಅಂದಿನಿಂದ ರೂಢಿಗೆ ಬಂದಿತೆಂದು ತೋರುತ್ತದೆ.

ಶ್ರೀ ಮಧ್ವಸಿದ್ಧಾಂತದ ಸಂಸ್ಕೃತ ಗ್ರಂಥಗಳಲ್ಲಿ ಅಡಕವಾಗಿರುವ ಶಾಸ್ತ್ರದ ಸಾರವೆಲ್ಲ ಹರಿದಾಸರ ಕನ್ನಡ ರಚನೆಗಳಲ್ಲಿ ಹುದುಗಿರುವುದನ್ನು ಈಗಾಗಲೇ ವಿದ್ವಾಂಸರು ಗುರುತಿಸಿರುವುದರಿಂದ ಈ ಸಾಹಿತ್ಯದ ಆಧ್ಯಾತ್ಮಿಕ ಮೌಲ್ಯವೇನೆಂಬುದನ್ನು ಇನ್ನು ಬಿಡಿಸಿ ಹೇಳಬೇಕಾಗಿಲ್ಲ. ಹರಿದಾಸ ಸಾಹಿತ್ಯ ಸೃಷ್ಟಿಯಲ್ಲಿ ಪಾತ್ರವಹಿಸಿದ ಯತಿಗಳೇ ಆಗಲಿ, ಹರಿದಾಸರೇ ಆಗಲಿ ಆಡಿರುವ ಒಂದೊಂದು ನುಡಿಯೂ ಅವರ ಅಪರೋಕ್ಷಾನುಭವದ ಅಭಿವ್ಯಕ್ತಿಯಾಗಿರುವುದರಿಂದ ಇದು ಅಂತರಂಗದ ವಾಣಿಯೆನ್ನಿಸಿ ಅಮೂಲ್ಯವಾದ ಸಾಹಿತ್ಯವೆನ್ನಲು ಅಡ್ಡಿಯಿಲ್ಲ. ಹರಿದಾಸರು ರಚಿಸಿರುವ ಕೀರ್ತನೆ, ಸುಳಾದಿ, ಉಗಾಭೋಗ, ವೃತ್ತನಾಮ ಮೊದಲಾದ ಪ್ರಕಾರಗಳೆಲ್ಲವೂ ಕರ್ನಾಟಕ ಸಂಗೀತಕ್ಕೆ ಹರಿದಾಸರು ನೀಡಿರುವ ಕೊಡುಗೆಯಾದುದರಿಂದ ಈ ರಚನೆಗಳನ್ನು ಕಂಡು ಯಾರಾದರೂ ಹೆಮ್ಮೆ ಪಡಬಹುದಾಗಿದೆ. ಈಗ ರೂಢಿಯಲ್ಲಿ ತಪ್ಪಿಹೋಗಿರುವ ಈ ವಿಶಿಷ್ಟ ಗೇಯ ಪ್ರಕಾರಗಳನ್ನು ಪುನರುಜ್ಜೀವಿಸುವ ಹೊಣೆ ನಮ್ಮ ಸಂಗೀತಗಾರರಿಗೆ ಸೇರಿದುದಾಗಿದೆ. ಸ್ವಧರ್ಮ, ಸಾಹಿತ್ಯ ಮತ್ತು ಸಂಗೀತಗಳ ತ್ರಿವೇಣಿ ಸಂಗಮವೆನ್ನಬಹುದಾದ ಈ ಹರಿದಾಸ ಸಾಹಿತ್ಯದ ರೂಪುರೇಷೆಗಳನ್ನು ಈ ಸಂಕಲನದಲ್ಲಿ ಅತ್ಯಂತ ಸಂಕ್ಷಿಪ್ತವಾಗಿ ಮಾಡಿಕೊಡಲಾಗಿದೆ.

ಕಳೆದ ಐದು ಶತಮಾನಗಳ ಅವಧಿಯಲ್ಲಿ ಬೆಳೆದು ಬೆಳಗಿದ ಹರಿದಾಸ ಸಾಹಿತ್ಯದ ಅಧ್ಯಯನಗಳನ್ನು ಕುರಿತಂತೆ ರಚಿತವಾಗಿರುವ ಈ ಕೆಳಗಿನ ಶ್ಲೋಕವನ್ನು ಉದಾಹರಿಸುವುದರ ಮೂಲಕ ಈ ಸಂಕ್ಷಿಪ್ತ ಪರಿಚಯವನ್ನು ಸಮಾಪ್ತಿಗೊಳಿಸುವುದು ಸಮುಚಿತವೆನ್ನಿಸುತ್ತದೆ.

ನಮಃ ಶ್ರೀ ಪಾದರಾಜಾಯ ನಮಸ್ತೇ ವ್ಯಾಸಯೋಗಿನೇ
ನಮಃ ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮಃ॥

೧

ದಯಮಾಡಿ ಸಲಹಯ್ಯ ಭಯನಿವಾರಣನೆ
ಹಯವದನ ನಿನ್ನ ಚರಣ ನಂಬಿದೆನೊ ಜೀಯ ಪ.

ಕ್ಷಣಕ್ಷಣಕೆ ನಾ ಮಾಡಿದಂಥ ಪಾಪಂಗಳನು
ಎಣಿಸಲಳವಲ್ಲ ಅಷ್ಟಿಷ್ಟಯೆಂದು
ಫಣಿಶಾಯಿ ನೀನೆನ್ನ ಅವಗುಣಗಳೆಣಿಸದೆ
ನೆನಹಿನಾತುರ ಕೊಟ್ಟು ದಾಸನೆಂದೆನಿಸಯ್ಯ ೧

ಕಂಡ ಕಂಡ ಕಡೆಗೆ ಪೋಪ ಚಂಚಲ ಮನವು
ಪಿಂಡ[1] ತಿಂಬಲ್ಲಿ ಬಹು ನಿಷ್ಠ ತಾನು
ಭಂಡಾಟದವನೆಂದು ಬಯಲಿಗೆ ತಾರದೆ
ಕೊಂಡಾಡುವಂತೆ ಭಕುತಿಯ ಕೊಟ್ಟು ಸಲಹಯ್ಯ ೨

ಜಾತಿಧರ್ಮವ ಬಿಟ್ಟು ಅಜಾಮಿಳನು ಇರುತಿರಲು
ಪ್ರೀತಿಯಿಂದಲಿ ಮುಕುತಿ ಕೊಡಲಿಲ್ಲವೆ
ಖ್ಯಾತಿಯನು ಕೇಳಿ ನಾ ಮರೆಹೊಕ್ಕೆ ಸಲಹಯ್ಯ
ವಾತಜನ[2] ಪರಿಪಾಲ ಶ್ರೀರಂಗವಿಠಲ ೩

---

1 ಕೂಳು 2 ಹನುಮಂತ

೧೨ ಹರಿಭಕ್ತಿವಾಹಿನಿ

೨

ಇದನಾದರು ಕೊಡದಿದ್ದರೆ ನಿನ್ನ
ಪದಕಮಲವ ನಂಬಿ ಭಜಿಸುವುದೆಂತೊ. ಪ.

ಗ್ರಾಸ[1]ವಾಸಗಳಿವೆ ಇಲ್ಲವೆಂದು, ನಿನ್ನ
ಬೇಸರಿಸಿ ಬೇಡ ಬಂದುದಿಲ್ಲ
ವಾಸುದೇವನೆ ನಿನ್ನ, ದಾಸರ ದಾಸರ
ದಾಸರ ದಾಸ್ಯವ ಕೊಡು ಸಾಕೆಂದರೆ ೧

ಸತಿ ಸುತರುಗಳ ಸಹಿತನಾಗಿ ನಾ
ಹಿತದಿಂದ ಇರಬೇಕೆಂಬುದಿಲ್ಲ
ಇತರ ವಿಷಯು[2]ಗಳಿಗೆರಗಿಸದೆ. ಮನಕೆ ನಿನ್ನ
ಕಥಾಮೃತವನು ಕೊಡು ಸಾಕೆಂದರೆ ೨

ಸಾಲವಾಯಿತೆಂದು ಸಂಬಳ ಎನಗೆ
ಸಾಲದೆಂದು ಬೇಡ ಬಂದುದಿಲ್ಲ
ನಾಲಗೆಯಲಿ ನಿನ್ನ ನಾಮದುಚ್ಚರಣೆಯ
ಪಾಲಿಸಬೇಕೆಂದು ಬೇಡಿದೆನಲ್ಲದೆ ೩

ಒಡವೆಗಳಿಲ್ಲ ಒಡ್ಯಾಣಗಳಿಲ್ಲೆಂದು
ಬಡವನೆಂದು ಬೇಡ ಬಂದುದಿಲ್ಲ
ಒಡೆಯ ನಿನ್ನಡಿಗಳಿಗೆರಗುವುದಕೆ ಮನ
ಬಿಡದಿಹದೊಂದನು ಕೊಡು ಸಾಕೆಂದರೆ ೪

ಆಗಬೇಕು ರಾಜ್ಯಭೋಗಗಳೆನಗೆಂದು
ಈಗ ನಾನು ಬೇಡ ಬಂದುದಿಲ್ಲ
ನಾಗಶಯನ ರಂಗವಿಠಲ ನಾ ನಿನ್ನ
ಬಾಗಿಲ ಕಾಯುವ ಭಾಗ್ಯ ಸಾಕೆಂದರೆ ೫

---

1 ಆಹಾರ 2 ನಾನಾ ಬಗೆಯ ಆಸೆಗಳು

೩

ಅಪರಾಧವೆನ್ನದಯ್ಯ ಹೇ ಜೀಯ ಪ.
ಅಪರಾಧವೆನ್ನದಯ್ಯ ಅಪರಿಮಿತವೆ ಸರಿ
ಕೃಪೆಮಾಡೊದಿಲ್ಲವೆ ಕೃಪಣವತ್ಸಲ ಕೃಷ್ಣ ಅ.ಪ.

ಹುಡುಗರು ಮಾಡುವ ತಪ್ಪಿಗೆ ಜನನಿ ತಾ
ಬಿಡುವಳೆ ಅದರಿಂದ ಕೃಪೆಯ ಮಾಡದಲೆ
ನಡೆವ ಕುದುರೆ ತಾನು ಎಡಹಿದರೆ ಸ್ವಾಮಿ
ಕಡೆಗೆ ಕಟ್ಟುವನೇನೊ ತಿರುಗಿ ನೋಡದಲೆ ೧

ಮಾಡು ಎಂದದ್ದನ್ನು ಬಿಟ್ಟರೆ ಅಪರಾಧ
ಬೇಡವೆಂದದ್ದನ್ನು ಮಾಡುವುದಪರಾಧ
ಈಡಿ[1]ಲ್ಲ ನಿನ್ನ ದಯ ಬೇಡುವೆನೊ, ನಿನಗೆ
ಮಾಡುವೆ ಬಿನ್ನಹ ನಾಚಿಕೆಯಿಲ್ಲದಲೆ ೨

ಬೇಡಿಕೊಂಬೆನೊ ವಾಸುದೇವ ಶ್ರೀಹರಿಯೆ
ನೋಡದಿದ್ದರೆ ಭಕುತ ಜನರು ತಮ್ಮ
ಬೀಡ ಸೇರಿಸರೆನ್ನ ಕೇಡೇನೊ ಇದಕಿಂತ
ನೋಡೊ ನೀ ದಯದಿಂದ ಭಕುತವತ್ಸಲ ಕೃಷ್ಣ.

೪

ತೊಂಡನು[2] ಕಂಡುದ ಬಿನ್ನೈಸುವೆನು
ಪಾಂಡವಪ್ರಿಯ ಎನ್ನ ತಪ್ಪುಕಾಯಯ್ಯ ಪ.

---

1 ಸಮಾನ 2 ಸೇವಕ

ಹರಿ ನಿನ್ನ ನಾಮ ಕಾಮಧೇನುವಿಗೆ
ದುರಿತದೊಟ್ಟಿಯ[1] ಮೇವು, ಭವಾಂಬುಧಿಯ
ಅರಸಿ ಕುಡಿವ ನೀರೆರೆವಡೆನ್ನಲ್ಲಿ
ಭರಿತವಾಗಿದೆ ಒಲಿದು ಎನ್ನೊಳ್ಯಾಕಿರಿಸೆ ೧

ಮುನಿಗಳ ಮನದ ಮೊನೆಯಾದ ಕೊನೆಯಲ್ಲಿ
ಘನ ಭಕ್ತಿ ಪಾಶದಿ ಸಿಲುಕಲ್ಯಾಕ
ಎನ್ನ ಚಿತ್ತ ಚಂಚಲದುಯ್ಯಾಲೆಯಲಿ
ನಿನ್ನ ಮನ ಬಂದಂತೆ ಓಲ್ಯಾಡಲಾಗದೆ ೨

ಕರ್ಣರಂಧ್ರದಿ ಮನವನು ಪೊಕ್ಕು ಪಾಪವ
ನಿನ್ನವರಲಿ ತಳವರಸ[2]ಲ್ಯಾಕೆ
ಎನ್ನೊಳ ಹೊರಗೆ ಪಾಪರಾಸಿಗಳಿವೆ
ನಿನ್ನ ಮನಬಂದಂತೆ ಸೂರೆಗೊಳ್ಳಲೊ ಕೃಷ್ಣ ೩

೫

ಬಾರಯ್ಯ ಎನ ಮನಮಂದಿರಕೆ ಪ.
ಬೇಗೊಂದು ಯೋಚನೆಮಾಡದೆ ಸಿರಿಪತಿ. ಅ.ಪ.

ನಾ ರಾಜಸಬುದ್ಧಿಯೆಂಬೆಯು, ನಿನ್ನ
ಕಾರುಣ್ಯದ ಸೋನೆ ಸೊರಗುವುದೆ
ವಾರವಾರಕೆ ಮೇಘವಾರಿಯು ಕರೆದರೆ
ಧಾರುಣಿಗೆ ಕ್ಷಾಮಬರುವುದೆ ಕೃಷ್ಣ ೧



1 ಪಾಪದ ರಾಶಿ, ೨ ಹುಡುಕು (?)

ತಾಮಸಬುದ್ಧಿ[1]ಯೆಂಬೆಯು, ನಿನ್ನ
ಶ್ರೀ ಮೂರ್ತಿ ಹೊಳೆದರೆ ತಮ[2]ವಡಗದೆ
ಶ್ರೀ ಮನೋಹರನೆ ಭಾನು ಉದಿಸಿದರೆ
ತಾಮಸವಡಗದೆ ಜಗದೊಳು ಕೃಷ್ಣ ೨

ನಾ ದ್ರೋಹಿ ಕಠಿಣನೆಂತೆಂಬೆಯು, ನಿನ್ನ
ಪಾದ ಪದುಮ ಪಾಪ ಹರವಲ್ಲವೆ
ಆ ದುಷ್ಟ ಶಿಲೆ ಸೋಕಿ ಋಷಿಪತ್ನಿಯಾದಳು
ನೀ ದಯಮಾಡೆ ನಾ ನೀಚನೆ ಸಿರಿಕೃಷ್ಣ ೩

೬

## ಧ್ರುವ ತಾಳ

ಕಾಮವೆಂಬ ಹೆಚ್ಚಿನ ಕಾಡ್ಗಿಚ್ಚೊಂದು ಕಡೆಯಲೆನ್ನ
ಸುಡುತಲಿದೆ
ಕ್ರೋಧವೆಂಬ ಹೆಬ್ಬುಲಿ ಹಸಿದು ಬಂದು ಕಡೆಯಲೆನ್ನ
ತಿನ್ನುತಲಿದೆ
ಲೋಭವೆಂಬ ದುಹರಕ್ಕಸ[3]ನೊಂದು ಕಡೆಯಲೆನ್ನ
ಹೀರುತಲೈದಾನೆ
ಮೋಹವೆಂಬ ಕಗ್ಗತ್ತಲೆಯು ಕವಿದು ದಿಕ್ಕುದೆಸೆ ಏನೂ
ತಿಳಿಯದಿದೆ
ಮದವೆಂಬ ಮದಸೊಕ್ಕಿದ ಕಾಡಾನೆ ಬಂದು ಕಡೆಯಲೆನ್ನ
ಸೀಳುತಲಿದೆ
ಮತ್ಸರವೆಂಬ ಮಹಾವಿಷದ ಚೇಳೊಂದು ಕಡೆಯಲೆನ್ನ
ಊರುತಲಿದೆ

---

1 ಮಂದಬುದ್ಧಿ. 2 ಕತ್ತಲೆ. 3 ದೊಡ್ಡ ರಾಕ್ಷಸ.

ಈ ಪರಿ ಭವ[1]ವೆಂಬಡವಿಯಲಿ ನಾನಾ ಪರಿಯ
ಶತ್ರುಗಳಿಗೊಳಗಾದೆ
ಶ್ರೀಪತಿ ಪರಮ ದಯಾನಿಧೆ ದೀನನಾಥನೆನ್ನೊಡೆಯ ರಕ್ಷಿಸು
ಸಿರಿಕೃಷ್ಣ

## ಮಠ್ಯ ತಾಳ

ಆಗದ ಹೋಗದ ಮನೆವಾರಂತೆ ಬೇರೊಬ್ಬ
ಲೋಗರಿ[2]ಗಾಗಿ ಹೊತ್ತು ಭವಾಟವಿಯಲ್ಲಿ
ರಾಗವೆಂಬ ಘನತೃಷೆ[3]ಯಿಂದ ಬಾಯೊಣಗಿ
ಭೋಗವೆಂಬ ಬಯಲಮೃಗತೃಷ್ಣೆ[4]ಗೋಡುತ

ಬೇಗೆಯಿಂದ ಬಿದ್ದೆನೊ ನರಕಕೂಪದಲಿ
ನಾಗಶಯನ[5] ಎನ್ನನುದ್ಧರಿಸೊ ಸಿರಿಕೃಷ್ಣ

## ರೂಪಕ ತಾಳ

ಇಂದ್ರಿಯಂಗಳೆಂಬ ಕಳ್ಳರೈವರು
ಬಂಧಿಸಿ ತಮ್ಮ ವಿಷಯಕ್ಕೊಯ್ದೆನ್ನ
ಕಂದಿಸಿ ಜ್ಞಾನವೆಂಬ ದೃಷ್ಟಿಯ
ಎಂದೆಂದಿನ ಧರ್ಮ ಧನವನೊಯ್ದರು
ಇಂದಿರೇಶ ಲೋಕಪತಿ ಸಿರಿಕೃಷ್ಣ ಕಾಯೆನ್ನ ತಂದೆ

## ಝಂಪೆ ತಾಳ

ನಾನಾಗರ್ಭವೆಂಬ ಕಂಪಿನಲೊಮ್ಮೊಮ್ಮೆ
ಹೀನೋಚ್ಚ ಜನ್ಮವೆಂಬ ತಗ್ಗು ಮಿಟ್ಟೆ[6]ಯಲೊಮ್ಮೆ

---

1 ಜನ್ಮ. 2 ಜನರು. 3 ಬಾಯಾರಿಕೆ. 4 ಮರೀಚಿಕೆ. 5 ವಿಷ್ಣು.
6 ದಿಣ್ಣೆ.

ಸ್ವರ್ಗವೆಂಬ ಪರ್ವತಾಗ್ರದಲೊಮ್ಮೊಮ್ಮೆ
ದುರ್ಗತಿಯೆಂಬ ಕಮರಿ[1]ಯಲಿ ತಾನೊಮ್ಮೆ
ಬಂದೆ ಭವಾಟವಿಯಲ್ಲಿ ನಿನ್ನ ಪಾದಾರ
ವಿಂದದ ನೆಳಲಲಿರಿಸೆನ್ನ ಸಿರಿಕೃಷ್ಣ

### ತ್ರಿಪುಟ ತಾಳ

ಹರಿದಾಸರ ನೆರವಿಲ್ಲದೆ ಹರಿಸೇವೆಯೆಂಬ ಪಥವ ಕಾಣದೆ
ಹರಿಪದವೆಂಬ ಜನುಮ ಭೂಮಿಯು ಪರಿದು ದೂರದಲ್ಲಿ ತಪ್ಪಿ
ಮರುಳಾದೆ ಭವಾಟವಿಯಲ್ಲಿ ಸಿರಿಪತಿ ನಿನ್ನ ಸೇರಿಸೊ ಸಿರಿಕೃಷ್ಣ

### ಅಟ ತಾಳ

ಮಾಯೆಯೆಂಬ ದುಷ್ಟರಾಯ
ಮಾನವೆಂಬ ಬಿಸುಗು ಮಂತ್ರಿ
ಇಂದ್ರಿಯಗಳೆಂಬ ತಿಂದೋಡುವ ಪರಿವಾರ
ಬಿಗಿದು ಕಟ್ಟಿ ಎನ್ನ ಹಗೆಗಳಿಗಿತ್ತರು
ಕಾಮಾದಿ ಹಗೆಗಳ ಶಿಕ್ಷಿಸಿ
ರಕ್ಷಿಸಯ್ಯ ಸಿರಿಕೃಷ್ಣ

### ಆದಿ ತಾಳ

ತಾಪತ್ರಯ[2]ವೆಂಬ ದಾವಾನಲ[3]ದಿಂದ
ಪಾಪರ ಸಂಗಮವೆಂಬ ವಿಷವೃಕ್ಷದಿಂದ
ಕಾಪಥ[4]ವೆಂಬ ಬಹು ತಪ್ಪುಗತಿಗಳಿಂದ
ಕೋಪವೆಂಬಟ್ಟುವ ಕಾಳೋರಗ[5]ದಿಂದ

---

1. ಹಳ್ಳ, 2. ಆಧಿದೈವಿಕ, ಆದಿಭೌತಿಕ, ಆಧ್ಯಾತ್ಮಿಕ
3. ಕಾಡುಗಿಚ್ಚು (ಕಾಳ್ಗಿಚ್ಚು), 4. ಕೆಟ್ಟದಾರಿ, 5. ಕೃಷ್ಣಸರ್ಪ

ಈ ಪರಿಯಲಿ ನೊಂದೆ ಭವಾಟವಿಯಲಿ
ನೀಪಾಲಿಸಬೇಕೆನ್ನನು ಸಿರಿಕೃಷ್ಣ

ಜತೆ

ಅತ್ತಿತ್ತ ಸುತ್ತಿ ಭವಾಟವಿಯಲಿ ನೊಂದೆ
ಇತ್ತ ಬಾರೆಂದು ನಿನ್ನ ಹತ್ತಿಲಿರಿಸೊ ಕೃಷ್ಣ

೭

ಎನ್ನ ಹುಯಲು[1] ಕೇಳಬಾರದೆ ಪ.
ಸ್ವಾಮಿ ನಿನಗೆ ಎನ್ನ ಮೊರೆಯು ಕೇಳಬಾರದೆ ಪ್ರ
ಸನ್ನ ಚೆನ್ನಕೇಶವರಾಯ ನಿನಗೆ ಅ.ಪ.

ಪಾಲಸಾಗರ ಮಧ್ಯದಲ್ಲಿ ಏಳುಸುತ್ತಿನ ಎಸೆವ ಕೋಟೆ
ನೀಲಮಾಣಿಕ್ಯ ವಜ್ರದಿಂದ ದಾರೆಯಿಕ್ಕಿದ ಸೆಜ್ಜೆಗೃಹ[2]
ಮೇಲೆ ಶೇಷನೊರಗು ಹಾಸಿಕೆ ಶ್ರೀರುಕ್ಮಿಣಿ ಸತ್ಯಭಾಮೆರೊಡನೆ
ಸರಸ
ಸಲ್ಲಾಪನೆ ಸ್ವಾಮಿ ಕೇಳು ಸಾಮಗಾನ ವೇದ ಘೋಷಣೆ ೧

ಸುತ್ತಲು ಬಪ್ಪುವ ಸನಕಾದಿಗಳು ಮೊತ್ತದಿಂದ ದೇವತೆಯರು
ಮತ್ತೆ ಊರ್ವಶಿ ರಂಭೆ ಮೇನಕೆ ಭಕ್ತ ನಾರದರ ಗೀತ
ಸುತ್ತ ಸುರರ ದುಂದುಭಿ ವಾಲಗ ಅಸುರರ ಕತ್ತರಿಸಿ ಕಡಿವ
ಕಾಳೆಗ
ಭಕ್ತ ಜನರಿಷ್ಟಾರ್ಥವನ್ನು ಕೊಡುವ ಊಳಿಗ ೨

ಮುನ್ನ ಈ ಭಾಗ್ಯ ಇದ್ದುದಿಲ್ಲವೆ ಸ್ವಾಮಿ ನಿನಗೆ
ಬನ್ನ[3]ಪಟ್ಟು ಧರ್ಮನರಸಿ ಸಭೆಯಲೊದರಲು ಅಕ್ಷಯವೆಂದು

---

1. ಕೂಗು. 2. ಮಲಗುವ ಮನೆ. 3. ಭಗ್ನ, ಭಂಗ.

ಸನ್ನೆ[1]ಯಿಂದ ಕರಿಯುಸಲಹಿದೆ ಅಜಾಮಿಳನ್ನ ನಿನ್ನ ಪ
ಟ್ಟಣಕೆ ಕರೆಸಿದೆ ಹಯುವದನ್ನ ಎನ್ನ ನೀನು ಸಲಹಲಾಗದೆ

೮

ಒಲ್ಲೆ ದುರಿತ[2]ಗಳೊಲ್ಲೆ ಒಲ್ಲೆ
ಫುಲ್ಲನಾಭ[3]ನ ಸ್ಮರಣೆ ಇಲ್ಲದೆ ಇರಲೊಲ್ಲೆ ಪ.

ದುರ್ಜನರ ಸಂಗವನೆಂದೆಂದಿಗೂ ಒಲ್ಲೆ
ಸಜ್ಜನರ ವಿರಸಗಳೊಲ್ಲೆ ಒಲ್ಲೆ
ಅರ್ಜುನ ಸಖ ನಿನ್ನ ಸೇವೆಯು ಬಿಡಲೊಲ್ಲೆ
ಅಜ್ಜಬಾಣ[4]ನ ಮೇಳ ಒಲ್ಲೆ ಒಲ್ಲೆನೊ ಸ್ವಾಮಿ ೧

ಒಲ್ಲೆವೆಂಬೊ ಅಹಂಕಾರ ಎಂದೆಂದಿಗೂ ಒಲ್ಲೆ
ಸಲ್ಲದ ಸುಖಗಳ ಒಲ್ಲೆ ಒಲ್ಲೆ
ಒಲ್ಲಿದ ಹರಿ ನಿಮ್ಮ ಪಾದವ ಬಿಡಲೊಲ್ಲೆ
ಕಲ್ಲಿಲ್ಲ ದೇವರ ಪೂಜೆ ಒಲ್ಲೆ ಒಲ್ಲೆನೊ ಸ್ವಾಮಿ ೨

ಹರಿನಾಮ ಸ್ಮರಣೆಯು ಮನದಿ ತೊರೆ[5]ದಿರಲೊಲ್ಲೆ
ದುರುವಿಷಯದಿ ಹರುಷ ಒಲ್ಲೆ ಒಲ್ಲೆ
ಕರುಣೆ ಹಯುವದನ್ನ ಕಂಡಲ್ಲದೆ ಮಿಕ್ಕ
ಕಾರುಣ್ಯದ ಹವಣು[6] ಒಲ್ಲೆ ಒಲ್ಲೆನೊ ಸ್ವಾಮಿ ೩

---

1. ಸಂಜ್ಞೆ, 2. ಪಾಪ, 3. ವಿಷ್ಣು, 4. ಮನ್ಮಥ,
5. ಬಿಡು, 6. ರೀತಿ.

## ೯

### ಉಗಾ ಭೋಗ

ನಿನ್ನ ಧ್ಯಾನದ ಶಕ್ತಿಯು ಕೊಡೊ
ಅನ್ಯರಲಿ ವಿರಕ್ತಿಯು ಕೊಡೊ
ನಿನ್ನ ನೋಡುವ ಯುಕ್ತಿಯು ಕೊಡೊ
ನಿನ್ನ ಪಾಡುವ ಭಕ್ತಿಯು ಕೊಡೊ
ನಿನ್ನಪ್ಪಿ ಬರುವ ಸಂಪತ್ತಿಯು ಕೊಡೊ

ಚಿತ್ತದಿ ತತ್ವದ ಕೃತ್ಯವ ತೋರೊ
ಮತ್ತೆ ತುದಿಯಲಿ ಎನಗೆ ಮುಕ್ತಿಯು ಕೊಡೊ
ಅತ್ತತ್ತ ಮಾಡೊ ಭವಕತ್ತಲೆಯೆನಗೆ
ಮುತ್ತಿದೆ ಹಯವದನ

## ೧೦

### ಉಗಾಭೋಗ

ಅಡಿಗಾಧಾರವಿಲ್ಲ ಹಿಡಿವುದಕೆ ಕೊಂಬಿಲ್ಲ
ಕಡೆ ಹಾಯಿಸುವರಿಲ್ಲ ಕಷ್ಟಪಟ್ಟೆನಲ್ಲ
ಕಣ್ಣೀರು ತಪ್ಪಲಿಲ್ಲ ಕಾಯಸುಖ ಪಡಲಿಲ್ಲ
ಉಣ ಹೋಗಿ ಬಾಯಿ ಮರೆತಂತಾಯಿತಲ್ಲ

ಬಡತನವು ಬಿಡಲಿಲ್ಲ ಭಂಗಪಟ್ಟೆನಲ್ಲ
ಗರುಡ ಸರ್ಪನ ಸ್ನೇಹದಂತಾಯಿತಲ್ಲ
ಎನ್ನ ಮನದುಬ್ಬಸವ ಸ್ವಾಮಿ ಶ್ರೀ ಹರಿಯೆ ಬಲ್ಲ
ಇನ್ನಾರಿಗುಸುರಲೋ ಶ್ರೀ ಹಯವದನರಾಯ

೧೦ ಎ

ಆದದ್ದೆಲ್ಲ ಒಳಿತೇ ಆಯಿತು, ನಮ್ಮ
ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು ಪ.

ದಂಡಿಗೆ[1]ಬೆತ್ತ ಹಿಡಿಯುವುದಕ್ಕೆ
ಮಂಡೆ[2] ಬಾಗಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾವಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯ ೧

ಗೋಪಾಳಬುಟ್ಟಿ[3] ಹಿಡಿಯುವುದಕ್ಕೆ
ಭೂಪತಿಯೆಂದು ಗರ್ವಿಸುತಿದ್ದೆ
ಆ ಪತ್ನೀಕುಲ ಸಾವಿರವಾಗಲಿ
ಗೋಪಾಳ ಬುಟ್ಟಿ ಹಿಡಿಸಿದಳಯ್ಯ ೨

ತುಳಸೀಮಾಲೆ ಹಾಕುವುದಕ್ಕೆ
ಅರಸನೆಂದು ತಿರುಗುತಲಿದ್ದೆ
ಸರಸಿಜಾಕ್ಷ ಪುರಂದರವಿಠಲನು
ತುಳಸೀಮಾಲೆ ಹಾಕಿಸಿದನು ೩

೧೦ ಬಿ

ವ್ಯಾಪಾರ ನಮಗಾಯಿತು ಪ.
ಶ್ರೀಪತಿ ಪಾದಾರವಿಂದ ಸೇವೆಯೆಂಬ ಅ.ಪ.

---

1 ತಂಬೂರಿಯ ನೀಳಭಾಗ 2 ತಲೆ 3 ಬವನಾಶಿ, ಭಿಕ್ಷ ಬೇಡುವ ಪಾತ್ರೆ.

ಹರಿಕರುಣವೆ ಅಂಗಿ ಗುರುಕರುಣ ಮುಂಡಾಸು[1]
ಹರಿದಾಸರ ದಯವೆಂಬೊ ವಲ್ಲಿ[2]
ಪರಮಪಾಪಿ ಕಲಿಯೆಂಬೊ ಪಾಪಾಸು[3] ಮೆಟ್ಟಿ
ದುರಾತ್ಮರಾದವರ ಎದೆಮೇಲೆ ನಡೆವಂಥ ೧

ಬಿಳಿಯ ಕಾಗದ ಹೃದಯ ಬಾಯಿಕಲಮದಾನಿ[4]
ನಾಲಿಗೆ ಎಂಬೋದು ಲೇಖಣಿಕೆಯು
ಶ್ರೀಲೋಲನ ಕಥೆ ದಿವ್ಯ ನಾಮಂಗಳ
ಶೀಲ ಮನದಿ ಬರೆದು ಹರಿಗೆ ಒಪ್ಪಿಸುವಂಥ ೨

ಮುಂದಣ ಆಗಮ್[5] ಸಂಸಾರದ ಬಾಧೆ
ಎಂದೆಂದಿಗು ಅದರ ಭಯ ಬಿಟ್ಟಿತು
ಹಿಂದಣ ಸಂಚಿತ್[6] ಸಾಲ ಭಾರಕ್ಕೆಲ್ಲ
ಸಂದಾಯ[7]ವನು ಮಾಡಿ ಕತಬಿ[8]ಹರಸಿಬಿಟ್ಟ ೩

ನುಡಿನುಡಿಗಾನಂದಬಾಷ್ಪ ರೋಮಾಂಚನ
ಮುಡುಪಿ[9]ಯೊಳಗೆ ಇಟ್ಟ ಕೈ ಜೀತವು[10]
ಕಡೆಯ ಸಂಬಳಕೆಲ್ಲ ಮುಕುತಿ ಸಾಧನವನ್ನು
ಕೊಡುವಂತೆ ತಿರುಗದ ಚೀಟಿ ಬರೆಸಿಕೊಟ್ಟ ೪

ಕಂಡಕಂಡವರಿಗೆ ಕಾರ್ಪಣ್ಯವ[11] ಪಟ್ಟು
ಮಂಡೆ ಅಡ್ಡಾಗಿ ನಾ ಬಳಲಲಿಲ್ಲ
ಪುಂಡರೀಕಾಕ್ಷ ಶ್ರೀ ಪುರಂದರವಿಠಲನು
ದಂಡಿಸಿ ವೀಳ್ಯವ[12] ಕೊಟ್ಟು ಸೇವೆಯೊಳಿಟ್ಟ ೫

---

1 ರುಮಾಲು 2 ಉತ್ತರೀಯ 3 ಜೋಡು 4 ಶಾಯಿಕುಡಿಕೆ 5 ಬರಲಿರುವ ಕರ್ಮ 6 ಕೂಡಿದ 7 ಪಾವತಿ ಮಾಡಿ 8 ಸಾಲದ ಪತ್ರ 9 ಕೈಚೀಲ 10 ದುಡಿಮೆ 11 ದೈನ್ಯ 12 ಒಪ್ಪಿಗೆ ವೀಳ್ಯ

೧೧

ದಾಸನ್ನ ಮಾಡಿಕೊ ಎನ್ನ–ಇಷ್ಟು
ಘಾಸಿ ಮಾಡುವರೇನೋ ಕರುಣಾಸಂಪನ್ನ ಪ.

ದುರುಳ ಬುದ್ಧಿ ಜಳೆಲ್ಲ ಬಿಡಿಸೊ–ನಿನ್ನ
ಕರುಣ ಕವಚವೆನ್ನ ಹರಣ[1]ಕ್ಕೆ ತೊಡಿಸೊ
ಚರಣಸೇವೆ ಎನಗೆ ಕೊಡಿಸೊ–ಅಭಯ
ಕರಪುಷ್ಪ ಎನ್ನಯ ಶಿರದೊಳು ಮಡಿಸೊ ೧

ದೃಢಭಕ್ತಿ ನಿನ್ನಲ್ಲಿ ಬೇಡಿ–ದೇವ
ಅಡಿಗೆರಗುವೆನಯ್ಯ ಅನುದಿನ ಪಾಡಿ
ಕಡೆಗಣ್ಣಲೇಕೆನ್ನ ನೋಡಿ–ಬಿಡುವೆ
ಕೊಡು ನಿನ್ನ ಧ್ಯಾನವ ಮನಶುದಿ ಮಾಡಿ ೨

ಮರೆಹೊಕ್ಕವರ ಕಾಯ್ವ ಬಿರುದು–ನೀ
ಮರೆಯದೆ ರಕ್ಷಣೆ ಮಾಡೆನ್ನ ಪೊರೆದು
ದುರಿತ ರಾಶಿಗಳೆಲ್ಲ ತರಿದು–ಸ್ವಾಮಿ
ಪುರಂದರವಿಠಲ ಕರುಣದಿ ಕರದು ೩

೧೨

ಬಿನ್ನಹಕೆ ಬಾಯಿಲ್ಲವಯ್ಯ ಪ.
ಅನಂತ ಅಪರಾಧ ಎನ್ನಲ್ಲಿ ಇರಲಾಗಿ ಅ.ಪ.

---

1 ಪ್ರಾಣ

ಶಿಶುಮೋಹ ಸತಿಮೋಹ ಜನನಿ ಜನಕರ ಮೋಹ
ರಸಿಕ ಭ್ರಾತರ[1] ಮೋಹ ರಾಜಮೋಹ
ಪಶು ಮೋಹ ಭೂಮೋಹ ಬಂಧುವರ್ಗದ ಮೋಹ
ಅಸುರಾರಿ[2] ನಿನ್ನ ಮರೆತನೋ ಹರಿಯೆ ೧

ಅನ್ನಮದ ಅರ್ಥ[3]ಮದ ಅಖಿಲ ವೈಭವದ ಮದ
ಮುನ್ನ ಪ್ರಾಯದ ಮದವು ರೂಪಮದವು
ತನ್ನ ಸತ್ವದ ಮದ ಧಾತ್ರಿ[4]ವಶವಾದ ಮದ
ಇನ್ನು ತನಗೆದುರಿಲ್ಲವೆಂತೆಂಬ ಮದದಿಂದ ೨

ಇಷ್ಟು ದೊರಕಿದರೆ ಮತ್ತಷ್ಟು ಬೇಕೆಂಬಾಸೆ
ಅಷ್ಟು ದೊರಕಿದರೆ ಮತ್ತಷ್ಟರಾಸೆ
ಕಷ್ಟ ಬೇಡೆಂಬಾಸೆ ಕಡುಸುಖವ ಕಾಂಬಾಸೆ
ನಷ್ಟ ಜೀವನದಾಸೆ ಪುರಂದರವಿಠಲ ೩

೧೩

ನಿನ್ನನೇ ನಂಬಿದೆನು ನೀನೆನ್ನ ಸಲಹಯ್ಯ ಪ.
ಎನ್ನ ಗುಣದೋಷಗಳನೆಣಿಸಬೇಡಯ್ಯ ಅ.ಪ.

ಬಾಲ್ಯದಲಿ ಕೆಲವು ದಿನ ಬರಿದೆ ಹೋಯಿತು ಹೊತ್ತು
ಮೇಲೆ ಯೌವನ ಮದದಿ ಮುಂದರಿಯದಿದ್ದೆ
ಜಾಲ ಸಂಸಾರದಲಿ ಸಿಲುಕಿ ಬಳಲಿದೆನಯ್ಯ
ಪಾಲಿಸೋ ಪರಮಾತ್ಮ ಭಕ್ತಿಯನು ಕೊಟ್ಟು ೧

---

1 ಸಹೋದರರು 2 ರಾಕ್ಷಸ ಸಂಹಾರಿಯಾದ ವಿಷ್ಣು 3 ಹಣ 4 ಭೂಮಿ

ಆಸೆಯೆಂಬುದು ಅಜನ ಲೋಕವ ಮುಟ್ಟುತಿದೆ
ಬೇಸರದು ಸ್ತ್ರೀಯರಲಿ ಬುದ್ಧಿಯೆನಗೆ
ವಾಸುದೇವನ ಸ್ಮರಣೆಯೊಮ್ಮೆಯಾದರು ಇಲ್ಲ
ಕ್ಲೇಶವನು ಬಿಡಿಸಿ ನಿನ್ನ ದಾಸನೆನಿಸಯ್ಯ ೨

ಈ ತೆರದಿ ಕಾಲವನು ಇಂದಿರೇಶನೆ ಕಳೆದೆ
ಭೀತಿಯಿಲ್ಲದೆ ಜ್ಞಾನರಹಿತನಾಗಿ
ಮಾತೆ ತನ್ನಯ ಶಿಶುವ ಮನ್ನಿಸುವ ತೆರನಂತೆ
ದಾತ[1] ಪುರಂದರವಿಠಲ ದಯಮಾಡಿ ಸಲಹೊ ೩

೧೪

ಕಂಡು ಕಂಡು ಎನ್ನ ಕೈಬಿಡುವರೇ ಪ.
ಪುಂಡರೀಕಾಕ್ಷ[2] ಸರ್ವೋತ್ತಮನೆ ದೇವ ಅ.ಪ.

ಬಂಧುಗಳು ಎನಗಿಲ್ಲ ಬದುಕಿನಲಿ ಸುಖವಿಲ್ಲ
ನಿಂದೆಯಲಿ ನೊಂದೆನೈ ನೀರಜಾಕ್ಷ[3]
ತಂದೆ ತಾಯಿಯು ನೀನೆ ಬಂಧುಬಳಗವು ನೀನೆ
ಎಂದೆಂದಿಗು ನಿನ್ನ ನಂಬಿಹೆನು ಕೃಷ್ಣ ೧

ಕ್ಷಣವೊಂದು ಯುಗವಾಗಿ ತೃಣಕಿಂತ ಕಡೆಯಾಗಿ
ಎಣಿಸಲಾರದ ಭವದಿ ನೊಂದೆ ನಾನು
ಸನಕಾದಿ ಮುನಿವಂದ್ಯ ವನಜ ಸಂಭವ[4]ನ ಪಿತ
ಫಣಿಶಾಯಿ ಪ್ರಹ್ಲಾದವರದ ಶ್ರೀಕೃಷ್ಣ ೨

---

1 ಒಡೆಯ 2 ವಿಷ್ಣು 3 ವಿಷ್ಣು 4 ಬ್ರಹ್ಮ

ಭಕ್ತವತ್ಸಲನೆಂಬೊ ಬಿರುದು ಪೊತ್ತ ಮೇಲೆ
ಭಕ್ತರಾಧೀನನಾಗಿರಬೇಡವೆ
ಮುಕ್ತಿದಾಯಕ ದೇವ ಪುರಂದರ ವಿಠಲನೆ
ಶಕ್ತ ನೀನಹುದೆಂದು ನಂಬಿದೆನೋ ಕೃಷ್ಣ ೩

೧೫

## ಉಗಾಭೋಗಗಳು

ಕಿಚ್ಚಿನೊಳಗೆ ಬಿದ್ದ ಕೀಟಕ[1]ನು ನಾನಯ್ಯ
ಅಚ್ಯುತನೆ ಕಾಯೊ, ಅನಂತನೆ ತೆಗೆಯೊ
ಗೋವಿಂದ ಹರಿ ಪೊರೆಯೊ ಪುರಂದರ ವಿಠಲ
ನೀ ಕರುಣವುಳ್ಳವನು ಕಾಣೊ

o o o o

ಕಾವ[2] ದೈವವು ನೀನೆ ಕೊಲುವ ದೈವವು ನೀನೆ
ಕೈವಲ್ಯ[3] ಫಲದಾತ ಕೇಶವನು ನೀನೆ
ಯಾವ ದೈವಕ್ಕೆ ಈ ವೈಭವವನು ಕಾಣೆ
ರಾವಣಾಂತಕ ಸ್ವಾಮಿ ಪುರಂದರ ವಿಠಲ

o o o o

ನಿನ್ನನ್ನೆ ಪಾಡುವೆ ನಿನ್ನನ್ನೆ ಪೊಗಳುವೆ
ನಿನ್ನನ್ನೆ ಬೇಡಿ ಬೇಸರಿಸುವೆ
ನಿನ್ನ ಕಾಲನು ಪಿಡಿವೆ ನಿನ್ನ ಹಾರೈಸುವೆ
ನಿನ್ನ ತೊಡರಿಗೆ[4] ಕೈಗೊಡುವೆ
ನಿನ್ನಂತೆ ಸಾಕಬಲ್ಲವರುಂಟೆ
ಘನ್ನ ಪುರಂದರವಿಠಲ ದೇವರ ದೇವ

---

1 ಹುಳು 2 ಸಲಹು 3 ಮೋಕ್ಷ 4 ಭಕ್ತರು

ಮಾತಾಪಿತರು ನಿನಗಂದೆ ಮಾರಿದರೆನ್ನ
ಸಾಥನೆ ನೀನೆನ್ನ ಸಲಹದಿದ್ದರೆ ದೇವ
ಯಾತಕೆ ಭಕ್ತವತ್ಸಲ[1]ನೆಂದೆನಿಸಿಕೊಂಡೆ
ನಾ ತಡೆಯೆನು ನಿನ್ನ ಬಿರುದಿಗಂಜುವನೆಲ್ಲ
ಸಾತ್ವಿಕ ದೈವವೆ ಸಲಹೊ ಎನ್ನ, ಪ್ರ
ಖ್ಯಾತ ಪುರುಷ ಶ್ರೀ ಪುರಂದರ ವಿಠಲ

o o o o

ಬಡವರೊಳಗೆ ಎನ್ನಿಂದಾರು ಬಡವರಿಲ್ಲ
ಕೊಡುವರೊಳಗೆ ನಿನ್ನಿಂದಾರು ಕೊಡುವರಿಲ್ಲ
ದೃಢಭಕ್ತಿ ಎನಗೆ ನಿನ್ನಲ್ಲಿ ಕಲ್ಪಿಸಿ
ಬಿಡದೆ ಸಲಹಯ್ಯ ಶ್ರೀ ಪುರಂದರವಿಠಲ

o o o o

ನಿನ್ನ ದಾಸನಾಗಿ ನಿನ್ನೆಂಜಲುಂಡವನ
ನೀನುದಾಸೀನ ಮಾಡಿದರೆ ಲೋಗರು ನಗರೆ?
ನಿನ್ನ ಚರಣ ಕಮಲವನ್ನು ಕೊರಳಲ್ಲಿ
ಕಟ್ಟಿಕೊಂಬುವೆ ಪುರಂದರ ವಿಠಲ

o o o o

ಹಗಲು ನಿನ್ನ ನೆನೆಯಲಿಲ್ಲ ಹಸಿವು ತೃಷೆಯಿಂದ
ಇರುಳು ನಿನ್ನ ನೆನೆಯಲಿಲ್ಲ ನಿದ್ರೆಭರದಿಂದ, ಈ
ಎರಡರ ಬಾಧೆಗೆ ನಾನೊಳಗಾದೆನೊ ಪುರಂದರ ವಿಠಲ

o o o o

---

1 ಭಕ್ತಪ್ರೇಮಿ

ಎನ್ನ ಕಡೆ ಹಾಯಿಸುವುದು ನಿನ್ನ ಭಾರ
ನಿನ್ನ ನೆನೆಯುತಲಿಹುದು ಎನ್ನ ವ್ಯಾಪಾರ
ಎನ್ನ ಸತಿ ಸುತರಿಗೆ ನೀನೇ ಗತಿ
ನಿನ್ನನೊಪ್ಪಿಸುವುದು ಎನ್ನ ನೀತಿ
ಎನ್ನ ಪಡಿಯಿಕ್ಕೆ[1] ಸಲಹುವುದು ನಿನ್ನ ಧರ್ಮ

೦ ೦ ೦ ೦

ಮನೆಯೆಂಬ ಆಸೆಯು ಎನ್ನ ಮುಂದುಗೆಡಿಸುತಿದೆ
ಮನೆವಾರುತೆಯು ಎನ್ನ ಭಂಗಪಡಿಸುತಿದೆ
ಸುತರಾಸೆಯು ಎನ್ನ ದೈನ್ಯಪಡಿಸುತಿದೆ
ಇನಿತಾಸೆಯುಳಿದು ಬುದ್ಧಿ ನಿನ್ನಲ್ಲಿ
ನಿಲುವಂತೆ ಮಾಡೊ ಸಿರಿ ಪುರಂದರ ವಿಠಲ

೧೬

ಸಾಕು ಸಾಕು ಮನುಜ ಸೇವೆಯು ರಂಗಯ್ಯ ಇನ್ನು ಪ.
ಸಾಕು ಸಾಕು ಮನುಜ ಸೇವೆ ಮಾಡಿ ದಣಿದು ನೊಂದೆ ನಾನು
ಬೇಕು ನಿನ್ನ ಪಾದ ಭಜನೆ ಕೊಟ್ಟು ಸಲಹೊ ರಂಗಯ್ಯ ಅಪ
ಹೊತ್ತಾರೆದ್ದು ಹೋಗಿ ಪರರ ಚಿತ್ತ ವೃತ್ತಿಯನ್ನು ತಿಳಿದು
ಹತ್ತಿರಿದ್ದು ಹಲವು ಕೆಲಸ ಭೃತ್ಯನಂತೆ ಮಾಡಿ, ರಿಕ್ತ
ಹಸ್ತ[2]ದಿಂದ ಮನೆಯ ಸೇರುವೆ, ಆಸೆಗಾಗಿ
ಮತ್ತೆ ಕಂಡ ಕಡೆಗೆ ತೊಲಗುವೆ, ಬಂದು ಅಪ
ರಾತ್ರಿ[3]ಯಲ್ಲಿ ತಿಂದು ಒರಗುವೆ–ರಂಗಯ್ಯ ರಂಗ ೧

---

1. ನೀಡುವಿಕೆ, 2. ಬರಿಯ ಕೈ, 3. ಮಧ್ಯರಾತ್ರಿ

ಸ್ನಾನ ಸಂಧ್ಯಾನುಷ್ಠಾನ ನೇಮವೆಲ್ಲ ತೊರೆದು ಬಿಟ್ಟು
ಹೀನನಾಗಿ ಕೆಟ್ಟ ಜನರ ಮನೆಗಳನ್ನು ತಿರುಗಿ ತಿರುಗಿ
ಶ್ವಾನ[1]ನಂತೆ ದಿನವ ಕಳೆವೆನೊ. ದುರಾಸೆಯನ್ನು
ಮನದಲ್ಲಿಟ್ಟುಕೊಂಡು ಕುದಿವೆನೊ
ಕೊನೆಗೂ ಎಳ್ಳುಕಾಳಿನಷ್ಟು ಸುಖವ ಕಾಣೆನೊ-ರಂಗಯ್ಯ
ರಂಗ ೨

ಒಡಲಿನಾಸೆಗಾಗಿ ನೊಣನು ತಡುಕಿ ಬಿದ್ದು ಜೇನಿನೊಳಗೆ
ಮಿಡುಕುವಂತೆ ಬಾಯಿ ಬಿಡುವೆ ಬಿಸರುಹಾಕ್ಷ[2]ನೆ
ಬಿಡಿಸು ಎನ್ನ ಪಾಶಬಂಧವ, ದೋಷ ದೂರ
ಕಾಗಿನೆಲೆಯಾದಿ ಕೇಶವ. ಕನಕದಾಸ-
ನೊಡೆಯ ವೆಂಕಟಾದ್ರಿ ಮಾಧವ–ರಂಗಯ್ಯ ರಂಗ ೩

೧೭

ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೆ ಪ.
ಕೂಗಿದರು ಧ್ವನಿ ಕೇಳಲಿಲ್ಲವೆ ನರಹರಿಯೆ ಅ.ಪ.

ಪರಮಪದ[3]ವೊಳಗೆ ವಿಷಧರನ[4] ತಲ್ಪ[5]ದಲಿ ನೀ
ಸಿರಿ ಸಹಿತ ಕ್ಷೀರವಾರಿಧಿ[6]ಯೊಳಿರಲು
ಕರಿರಾಜ ಕಷ್ಟದಲಿ ಆದಿಮೂಲಾಯೆಂದು
ಕರೆಯಲಾಕ್ಷಣ ಬಂದು ಒದಗಿದೆಯೋ ನರಹರಿಯೆ ೧

ಕಡುಕೋಪದಿಂ ಖಳ[7]ನು ಖಡ್ಗವನೆ ಪಿಡಿದು ನಿ
ನ್ನೊಡೆಯನೆಲ್ಲಿಹನೆಂದು ನುಡಿಯೆ
ದೃಢ ಭಕುತಿಯಲಿ ಶಿಶುವು ಬಿಡದೆ ನಿನ್ನನು ಭಜಿಸೆ
ಸಡಗರದಿ ಸ್ತಂಭ[8]ದಿಂದೊಡೆದೆ ನರಹರಿಯೆ ೨

---

1 ನಾಯಿ, 2 ತಾವರೆಗಣ್ಣ, 3 ಸ್ವರ್ಗವಾಸ (ವೈಕುಂಠ), 4 ಆದಿಶೇಷ, 5 ಹಾಸಿಗೆ, 6 ಹಾಲಿನ ಸಮುದ್ರ 7 ದುಷ್ಟ 8 ಕಂಬ

ಯಮಸುತನ ರಾಣಿಗಕ್ಷಯವಸನವನಿತ್ತ
ಸಮಯದಲಿ ಅಜಮಿಳನ ಪೊರೆದೆ
ಸಮಯಾಸಮಯವುಂಟೆ ಭಕ್ತ ವತ್ಸಲ ನಿನಗೆ
ಕಮಲಾಕ್ಷ ಕಾಗಿನೆಲೆಯಾದಿ ಕೇಶವನೆ ೩

೧೮

ಇಂದು ಎನಗೆ ಗೋವಿಂದ ನಿಮ್ಮ ಪಾದಾರ
ವಿಂದ[1]ವ ತೋರೋ ಮುಕುಂದನೆ ಪ.

ಸುಂದರವದನನೆ ನಂದ ಗೋಪಿಯ ಕಂದ
ಮಂದರೋ[2]ದ್ಧರ ಆನಂದ ಇಂದಿರೆ ರಮಣ ಅ.ಪ.

ನೊಂದೆನಯ್ಯ ಭವಬಂಧನದೊಳು ಸಿಲುಕಿ
ಮುಂದೆ ದಾರಿ ಕಾಣದೆ ಕುಂದಿದೆ ಜಗದೊಳು
ಕಂದನೆಂದು ಎನ್ನ ಕುಂದುಗಳೆಣಿಸದೆ
ತಂದೆ ಕಾಯೋ ಕೃಷ್ಣ ಕಂದರ್ಪಜನಕನೆ ೧

ಮೂಢತನದಿ ಬಲು ಹೇಡಿ ಜೀವನನಾಗಿ
ದೃಢ ಭಕುತಿಯನ್ನು ಮಾಡಲಿಲ್ಲವೊ ಹರಿಯೆ
ನೋಡಲಿಲ್ಲವೊ ನಿನ್ನ ಪಾಡಲಿಲ್ಲವೊ ಮಹಿಮೆ
ಗಾಡಿಕಾರ[3] ಕೃಷ್ಣ ಬೇಡಿಕೊಂಬೆನೊ ಕೃಷ್ಣ ೨

1 ಅಡಿದಾವರೆ 2 ಮಂದರ ಪರ್ವತ 3 ಚೆಲುವ

ಧಾರುಣಿಯೊಳು ಭೂಭಾರ ಜೀವ ನಾನಾಗಿ
ದಾರಿ ತಪ್ಪಿ ನಡೆವೆ ಸೇರಿದೆ ಕುಜನರ
ಆರು ಕಾಯುವರಿಲ್ಲ ಸೇರಿದೆ ನಿನಗಯ್ಯ
ಧೀರ ವೇಣುಗೋಪಾಲ ಪಾರುಗಾಣಿಸೋ ಈಗ ೩

೧೯

ಎಂದಿಗಾಗೋದೋ ನಿನ್ನ ದರುಶನ ಪ.
ಅಂದಿಗಲ್ಲದೆ ಬಂಧ ನೀಗದೋ ಅ.ಪ.

ಗಾನಲೋಲ ಶ್ರೀವತ್ಸ ಲಾಂಛನ[1]
ದಾನವಾಂತಕ[2] ದೀನ[3]ರಕ್ಷಕ ೧

ಯಾರಿಗೆ ಮೊರೆಯಿಡಲೊ ದೇವನೆ
ಸಾರಿ ಬಂದು ನೀ ಕಾಯೊ ಬೇಗನೆ ೨

ಗಜವ ಪೊರೆದೆಯೊ ಗರುಡಗಮನನೆ
ತ್ರಿಜಗಭರಿತ[4] ಶ್ರೀ ವಿಜಯ ವಿಠಲ ೩

೨೦

ಬಂದು ನಿಲ್ಲೋ ಕಣ್ಣಮುಂದೆ ಬಂದು ನಿಲ್ಲೋ ಪ.

ಬಂದು ನಿಲ್ಲೋ ನಿನ್ನ ಪಾದಕೆ ವಂದಿಪೆ
ಇಂದಿರೆಯರಸ ಗೋವಿಂದ ಮುಕುಂದ, ನೀ ಅ.ಪ.

---

1 ಗುರುತು, 2 ರಾಕ್ಷಸರನ್ನು ಸಂಹರಿಸಿದವನು, 3 ಬಡವ
4 ಮೂರು ಲೋಕಗಳಲ್ಲಿಯೂ ಆವರಿಸಿರುವವನು

ಅರಳಿದವರ ಕೆಂದಾವರೆಯ ಧಿಕ್ಕರಿಸುವ
ಚರಣಾರವಿಂದವನಿರುತ ತೋರಿಸುತಲಿ ೧

ನೀಲಾಲಕ[1]ಭ್ರಮರ[2]ಕುಂಡಲ[3]ಮಂಡಿತ[4]
ಮೇಲಾದ ರಾಕೇಂದು[5]ಮುಖವ ತೋರಿಸುತ ೨

ಪದುಮನೇತ್ರನೆ ನಿನ್ನ ಸದನವೆನ್ನುತ ಎನ್ನ
ಹೃದಯದೊಳಗೆ ಇಟ್ಟು ಮುದದಿ ಭಜನೆ ಮಾಳ್ಪೆ ೩

ಕರಿಯ ಮೊರೆಯ ಕೇಳಿ ಕರುಣದಿ ಬಂದಂತೆ
ಕರೆದಾಗ ನಿನ್ನ ದಿವ್ಯಚರಣ ತೋರಿಸುತಲಿ ೪

ಅಜ[6]ಭವಾದಿ[7]ಗಳಿಗೆ ನಿಜವ ತೋರುವಂತೆ
ಭಜಿಸಿ ಭಕ್ತರಿಗೊಲಿದು ವಿಜಯ ವಿಠಲರಂಗ ೫

೨೧

ವಿಗ್ರಹವನು ನಿಲಿಸೊ ವೆಂಕಟ, ಗಗ
ನಾಗ್ರಕ್ಕೆ[8] ಬೆಳೆದೂ ಗಂಗೆಯ ಪಡೆದ ನಿನ್ನ ಪ.

ರನ್ನದ ಮಕುಟ ಸುವರ್ಣಕುಂಡಲ ತೇಜ
ಚೆನ್ನ ಗಂಡಸ್ಥಳ[9]ದಿ ತೂಗಿ ಪೊಳೆವ ನಿನ್ನ ೧

ಕೊರಳ ತ್ರಿರೇಖೆಯು ಉರು[10]ಕೌಸ್ತುಭ[11]ಹಾರ
ಉರ[12]ದಲ್ಲಿ ಶ್ರೀವತ್ಸ[13] ಧರಿಸಿ ಮೆರೆವ, ನಿನ್ನ ೩

1 ಕಪ್ಪುಕೂದಲು, 2 ದುಂಬಿ, 3 ಕಿವಿಯ ಆಭರಣ, 4 ಶೋಭಿಸುವ
5 ಪೂರ್ಣಚಂದ್ರ, 6 ಬ್ರಹ್ಮ, 7 ಈಶ್ವರ, 8 ಆಕಾಶದ ತುದಿ, 9 ಕೆನ್ನೆ
10 ಶ್ರೇಷ್ಠ 11 ಶ್ರೀ ವಿಷ್ಣು ಧರಿಸಿರುವ ರತ್ನ, 12 ಎದೆ, 13 ಶ್ರೀವಿಷ್ಣು
ವಿನ ಎದೆಯಲ್ಲಿರುವ ಪವಿತ್ರ ಚಿಹ್ನೆ.

ಕುಕ್ಷಿ[1]ಯೊಳಗೆ ಲಕ್ಷಲೋಕವನಡಗಿಸಿ, ಅ
ಪೇಕ್ಷೆಯಿಂ ಸುಜನರ ರಕ್ಷಿಸುವ, ನಿನ್ನ ೩

ನಖ[2] ದೊಳನಂತ ಬ್ರಹ್ಮಾಂಡವನಡಗಿಸಿ
ಮಕ್ಕಳಾಟಿಕೆಯಂತೆ ಮರುಳು[3] ಮಾಡುವ, ನಿನ್ನ ೪

ಉತ್ಪತ್ತಿ, ಸ್ಥಿತಿ, ಲಯ[4]ಕಾರಣಕರ್ತ ಜ
ಗತ್ಪತಿ ವಿಜಯವಿಠಲ ವೆಂಕಟ ೫

೨೨

ಆವ ರೋಗವೊ ಎನಗೆ ದೇವ ಧನ್ವಂತ್ರಿ[5] ಪ.

ಸಾವಧಾನದಿ ಕೈಯ ಪಿಡಿದು ನೀ ನೋಡಯ್ಯ ಅ.ಪ.

ಹರಿಮೂರ್ತಿಗಳು ಕಾಣಿಸವು ಎನ್ನ ಕಂಗಳಿಗೆ
ಹರಿಯ ಕೀರ್ತನೆಯು ಕೇಳಿಸದೆನ್ನ ಕಿವಿಗೆ
ಹರಿ ಮಂತ್ರ ಸ್ತೋತ್ರ ಬಾರದು ಎನ್ನ ನಾಲಗೆಗೆ
ಹರಿಪ್ರಸಾದವು ಜಿಹ್ವೆ[6]ಗೆ ಸವಿಯಾಗದಯ್ಯ ೧

ಹರಿಪಾದಸೇವೆಗೆನ್ನ ಹಸ್ತಗಳು ಚಲಿಸವು
ಗುರುಹಿರಿಯರಂಘ್ರಿ[7]ಗೆ ಶಿರ ಬಾಗದು
ಹರಿಯ ನಿರ್ಮಾಲ್ಯ[8] ವಾಘ್ರಾಣಿಸ[9]ದು ನಾಸಿಕವು
ಹರಿಯಾತ್ರೆಗಳಿಗೆನ್ನ ಕಾಲೇಳದಯ್ಯ ೨

1 ಹೊಟ್ಟೆ 2 ಉಗುರು 3 ಭ್ರಮೆ 4 ಅಳಿವು 5 ದೇವತೆಗಳ ವೈದ್ಯ
6 ನಾಲಗೆ 7 ಪಾದ 8 ದೇವರ ಮೈಮೇಲಿದ್ದ ಹೂವಿನ ಹಾರ
9 ಮೂಸಿ ನೋಡುವುದು

ಅನಾಥ ಬಂಧು ಗೋಪಾಲ ವಿಠಲರೇಯ
ಎನ್ನ ಭಾಗದ ವೈದ್ಯ ನೀನೆಯಾದೆ
ಅನಾದಿ ಕಾಲದ ಭವರೋಗ ಕಳೆಯಯ್ಯ
ನಾನೆಂದಿಗು ಮರೆಯೆ ನೀ ಮಾಡಿದುಪಕಾರ ೩

೨೩

ಏಕೆ ಮಮತೆ ಕೊಟ್ಟು ದಣಿಸುವಿ ರಂಗ
ನೀ ಕರುಣದಿ ಎನ್ನ ಪಾಲಿಸೋ ಕೃಷ್ಣ ಪ.

ನಿನ್ನ ಹಂಬಲಿಸದೆ ಅನ್ಯ ವಿಷಯಗಳಿ
ಗೆನ್ನನೊಪ್ಪಿಸುವುದು ನೀತ[1]ವೆ
ಮನ್ನಿಸಿ ದಯದಿ ನೀ ಎನ್ನ ಪಾಲಿಸಲು ನಾ
ನಿನ್ನ ನೇಮಕೆ ಪ್ರತಿಕೂಲನೆ ೧

ತನುವು ತನ್ನದು ಅಲ್ಲ ತನು ಸಂಬಂಧಿಗಳೆಂಬೋ
ತನುವ್ಯಾರೋ ತಾನ್ಯಾರೋ ಅವರಿಗೆ
ಧನ ಮೊದಲಾದ ವಿಷಯಗಳ ಅನುಭವ ಹಿಂ
ದಿನ ದೇಹದಂತಲ್ಲವೆ ೨

ಇಂದ್ರಿಯಂಗಳು ವಿಷಯದಿಂದ ತೆಗೆಯಲು ಗೋ
ವಿಂದ ಎನ್ನ ವಶಕೆ ಬಾರವೋ
ಇಂದಿರೆ ಅರಸ ಬ್ರಹ್ಮಾದಿವಂದಿತ ನಿನ್ನ
ಬಂಧಕ ಶಕುತಿಗೆ ನಮೋ ನಮೋ ೩

1 ಉಚಿತ, ಯುಕ್ತ.

ಅರಿತು ಅರಿತು ಎನಗರೆಲವ[1]ವಾದರು
ವಿರಕುತಿ ವಿಷಯದಿ ಬಾರದು
ಕರುಣಾಸಾಗರ ನಿನ್ನ ಮರೆಹೊಕ್ಕಲ್ಲದೆ
ಮರುಳು ನೀಗುವ ಬಗೆಗಾಣೆನೋ ೪

ಎಂದಿಗೆ ನಿನ್ನ ಚಿತ್ತಕೆ ಬರುವುದೊ ಸ್ವಾಮಿ
ಅಂದೆ ಉದ್ಧರಿಸಯ್ಯ ಕರುಣೆಯ್ಯೆ
ಸುಂದರ ವಿಗ್ರಹ ಗೋಪಾಲ ವಿಠಲ ಸುಖ
ಸಾಂದ್ರ[2] ಭವಮೋಚಕ[3] ನಮೋ ನಮೋ ೫

೨೪

ಏನೆಂದು ಬಿನ್ನೈಸಲಯ್ಯ ಎನ್ನ ಮನ
ನಿನ್ನ ಧೇನಿಸ[4]ಲೊಲ್ಲದು ಪ.

ಶ್ರೀನಿವಾಸ ಸುರದ್ರುಮ[5]ನೆ ಭ
ಕ್ತಾನುಕಂಪಿ ನೀನು ಕರುಣಿಸು ಅ.ಪ.

ಇಲ್ಲದ ಚಿಂತೆಗಳ ಚಿಂತಿಸಿ ಮನ
ಅಲ್ಲ[6] ತಿಂದಿಲಿಯಂದದಿ
ತಲ್ಲಣಿಸುತ್ತಿದೆ ತಾವರೆಯೆಲೆಯಲ್ಲಿ
ನಿಲ್ಲದುದಕ ಬಿಂದುವಿನ ತೆರದಂತೆ ೧

1 ಸ್ವಲ್ಪ 2 ದಟ್ಟವಾಗಿ 3 ಬದುಕಿನಿಂದ ಬಿಡುಗಡೆ ನೀಡುವವನು
4 ಧ್ಯಾನಿಸು 5 ಕಲ್ಪವೃಕ್ಷ 6 ಶುಂಠಿ

ಸೆಳೆದು ಸೆಳೆದು ನಿನ್ನ ಪಾದದಿ ಮನ
ಗಳಿಗೆ ಧೇನಿಸು ಎಂದರೆ
ಕಳವಳಿಸುತಲಿದೆ ಕಂಡ ಕಂಡ ವಿಷಯ
ಕ್ಕೆಳೆವುತ್ತಲಿದೆ ಎನ್ನ ಏನು ಮಾಡಲಿ

ಪರರ ಸಂಪದವ ಕಂಡು ಸೈರಿಸದಲೆ
ಪರಮಾಸೂಯ[1]ವ ಪಡುತ
ಕರೆಕರೆಯ ತನ್ನೊಳಗೆ ತಾ ಪಡುತ ಈ
ತೆರದಲ್ಲಿ ಇಪ್ಪುದೊ ಎನ್ನಯ ಮನವು ೩

ಮನದಾಸೆಗೇನೆಂಬೆನು ಪೇಳಲು ಲಜ್ಜೆ
ಮನಸಿಜನಯ್ಯ[2] ಕೇಳೊ
ಸೆಣಿಸಿ ಸೆಣಿಸುತ ಶಾಂತವಾಗದೆ
ದಣಿಸುತಿದೆ ಧನದಾಸೆಯಿಂದ ೪

ಪಂಚವೃತ್ಯಾತ್ಮಕ[3]ದ ಈ ಮನದ ಪ್ರ
ಪಂಚವೆಲ್ಲವು ನಿನಗೆ
ವಂಚನೆಯಿಲ್ಲದೆ ಒರೆ[4]ದು ಪೇಳಿದೆ ವಿ
ರಿಂಚಿವರದ ಗೋಪಾಲವಿಠಲ ೫

1 ಹೊಟ್ಟೆಕಿಚ್ಚು 2 ಮನ್ಮಥನ ತಂದೆಯಾದ ವಿಷ್ಣು 3 ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಚೇತನ. 4 ಪರೀಕ್ಷಿಸಿ

೨೫

ಕೊಟ್ಟ ಬಿಡಾರದಲಿ ಎಷ್ಟು ದಿನ ಜೀವಿಸಲೊ
ಕಷ್ಟಪಡಲಾರೆ ಹರಿಯೆ ಪ.

ಕೋಟಲೆಯ ಸಂಸಾರ ಸಾಗರದಿ ಸಿಲುಕಿ ನಾ
ಪಾಟುಪಡಲಾರೆ ಹರಿಯೆ ಅ.ಪ.

ಕಟ್ಟುಗಳು ಸಡಿಲಿದುವು ಒಳೆ ವೊಳೆ ಕದಲಿದುವು
ನೆಟ್ಟ ಕಂಬಗಳು ಕುಸಿದುವು
ತೊಟ್ಟ ಪಡಸಾಲೆಗಳು ಬಟ್ಟಬಯಲಾದುವು
ಕಟ್ಟ ಹೊದ್ದಿಸಲಾರೆನೋ ಸ್ವಾಮಿ ೧

ಆರೆರಡು[1] ಹಾರಿದುವು ಹಾರಿಹೋಯಿತು ಹೊದಿಕೆ
ಜಾರಿ ಬಿದ್ದುವು ಗಳುಗಳು
ಆರುಮೂರೆಂ[2]ಬ ತಲೆಬಾಗಿಲೆಲ್ಲವು ಕುಸಿದು
ಸೋರುತಿದೆ ನಾಲ್ಕುಕಡೆಗೆ ಸ್ವಾಮಿ ೨

ಗೇಣೇಳು ನಿಚ್ಚಣಿಕೆ[3] ಬಾಣದ ನೆಲೆ ಸೂತ್ರ
ಕ್ಷೋಣಿ[4]ಯಲಿ ಓಡ್ಯಾಡುತ
ಪ್ರಾಣನಾಯಕ ಗುರುಗೋಪಾಲ ವಿಠಲ
ಆನಂದನಿಲಯವಾಸ ಶ್ರೀಶ ೩

---

1 ಹನ್ನೆರಡು ಇಂದ್ರಿಯಗಳು : ಪಂಚ ಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ, ಬುದ್ಧಿ, ಮನಸ್ಸು 2 ನವದ್ವಾರ 3 ಏಣಿ 4 ಭೂಮಿ.

೨೬

ಸರ್ವಾಂತರ್ಯಾಮಿ ಸಲಹೊ ಎನ್ನ ಪ.

ದುರ್ವಾರ್ತೆ ಕೇಳಿ ಮನ ಬಿಡದೆ ಚಿಂತಿಸುತಿದೆ ಅ.ಪ.

ಜೀವರಿಗೆ ಗುಣ ಕಾಲ ಕರ್ಮ ಪ್ರಕೃತಿಗಳ ಸ್ವ
ಭಾವಗಳನ್ನನುಸರಿಸಿ ಸುಖದುಃಖವ
ಈವ[1] ದೊರೆ ನೀನಲ್ಲದಿನ್ನುಂಟೆ ಜಗಕೆ ಮು
ತ್ತಾವನ್ಯೆ ಭಕ್ತರನು ಪಾಲಿಸುವ ದಾತ[2] ೧

ಸತ್ಯ ಸಂಕಲ್ಪ ನೀನೆಂಬುದಿದು ಸತ್ಯ
ಭಕ್ತವತ್ಸಲನೆಂಬೊ ಬಿರುದಿಲ್ಲವೆ
ದತ್ತಾತ್ರೇಯ[3] ನಿನ್ನ ಸ್ಮರಣೆ ಮಾತ್ರದಿ ಅಪ
ಮೃತ್ಯು ಪರಿಹರವಹುದು ಸಂದೇಹವಿಲ್ಲವಿದಕೆ ೨

ಶ್ರೀಪತೇ ಎನ್ನ ವಿಜ್ಞಾಪನೆಯು ಕೈಕೊಂಡು
ಪಾಪಿ ಜನರಿಂದ ಬಂದಾಪತ್ತನು
ನೀ ಪರಿಹರಿಸಯ್ಯ ದ್ರೌಪದೀವರದ ಕರು
ಣಾಪಯೋನಿಧಿ ಜಗನ್ನಾಥ ವಿಠಲ ಸ್ವಾಮಿ ೩

೨೭

ತಂದೆ ತಾಯಿ ಪುತ್ರ ನೀನೆ; ಬಾಂಧವ ನೀನೆ
ನಿನ್ನಿಂದ ಬಳಗಿಲ್ಲೆನಗೆ
ಇಂದಿರಾಧವ[4]ನೇ ಕಾಯೋ ಪ.

---

1 ಕೊಡುವ 2 ಒಡೆಯ 3 ಅನಸೂಯೆಯ ಪುತ್ರ (ವಿಷ್ಣುವಿನ ಅಂಶ)
4 ಲಕ್ಷ್ಮೀಪತಿ

ಹೊಲೆಯ ರಕ್ತದಿ ಶ್ವೇತ[1]ನಿಲಿಸಿದಾನೋರ್ವ ಪಿತ ೧
ನೆಲೆಸಿ ಗರ್ಭದೊಳು ರಕ್ಷಿಸಿದನೇನು
ಹಲವು ಯೋನಿ[2]ಯ ತೋರಿ ತೊಳಲಿಸಿ ತುದಿಯಲ್ಲಿ
ನೆಲೆಗೆ ನಿಲ್ಲಿಸುವಂಥ ಸುಲಭ ಜನಕ ನೀನಲ್ಲವೆ

ನವಮಾಸ ಧರಿಸಿ ಸ್ತನ್ಯ[3]ವನುಣಲಿತ್ತಳವ್ವೆ
ತವಕದಿ ನಡೆ ನುಡಿಸುವೆಯೊ ನೀನು
ಆವ ಕಾಲಕಾಲದಲ್ಲಿ ತವ[4] ಗರ್ಭದಲ್ಲಿ ಪೊತ್ತು
ಜೀವಕೆ ಚೈತನ್ಯಶಸ[5]ನೀವ ತಾಯಿ ನೀನಲ್ಲವೆ ೨

ಶ್ರೇಯಸಾದರಿಸುವರು ಪ್ರಿಯಸಖರೆಲ್ಲರು ನಿಃ
ಶ್ರೇಯಃ[6]ಸದಿ ಸುಖ ಮುದದಾಯಕನು ನೀನೆ
ಮಾಯಪಾಶ ಬಂಧನದಿ ನೋಯಿಸುವ ವರ್ಗ[7]ಬಾ
ಧೆಯನಟ್ಟಿ ಕಳೆವ ಚಿನ್ಮಯ ಪುತ್ರ ನೀನಲ್ಲವೆ ೩

ವಿತ್ತ[8]ವಿರೆ ಸಹೋದರರಿತ್ತ ಬನ್ನಿ ಉಣ್ಣೆಂಬರು
ವಿತ್ತ ಶೂನ್ಯನಾದರೆ ನೀನುಪೇಕ್ಷಿಸ[9]ಯ್ಯ
ಒತ್ತಿಬಹ ದುರಿತ ವಿಪತ್ತುಗಳ ಸವರಿಸಿ
ಮುಕ್ತಿಯ ಪದವೀವನಿಮಿತ್ತ [10] ಬಂಧು ನೀನಲ್ಲವೆ ೪

---

1 ಶುಕ್ಲ 2 ಜನನ ಸ್ಥಳ 3 ಮೊಲೆ 4 ನಿನ್ನ 5 ಅನ್ನ 6 ಆಪತ್ಕಾಲ
7 ಅರಿಷಡ್ವರ್ಗ 8 ಸಂಪತ್ತು 9 ಅಸಡ್ಡೆ 10 ಅವ್ಯಾಜ (ಅಕಾರಣ)

ಸಿರಿಯು ಪೋಗೆ ನಿಲ್ಲರು ಶರೀರ ಸಂಬಂಧಿಗಳಾ
ತುರರ[1] ದಾರಿದ್ರ್ಯ ಪಾಪಹರನು ನೀನೆ
ಕರುಣೆ ಪ್ರಸನ್ನ ವೆಂಕಟರಮಣ ನಿನ್ನ ನಾಮ
ಸ್ಮರಣೆ ಎನ್ನ ಜಿಹ್ವೆ[2]ಗೆ ಮರೆಯದಿರಲಿ ಕಂಡ್ಯ ೫

೨೮

ಭಕ್ತವತ್ಸಲನೆಂಬ ಬಿರುದು ಬಿಡದಿರು ದೇವ
ಬಹುಪರಾಕೆಲೊ ಮುರಾರಿ ಪ.

ಶಕ್ತ ನೀನೆಂದು ನಂಬಿರುವೆ ಕೃಪಾಸಿಂಧು
ರಾಕ್ಷಸಾಂತಕ ಸಲಹೊ ರಾಜೀವದಳ[3]ನೇತ್ರ ಅ.ಪ.

ಮತ್ತೆ ಗಜ ಮೈಮರೆದು ಸುತ್ತಿ ಕೆಸರೊಳು ಬಿದ್ದು
ಶಕ್ತಿಹೀನನಾಗಿ ಏಳದಂತಾಗಿದೆ
ಮತ್ತಾರಿಗಳವಿಲ್ಲ ಮಂದರಾದ್ರಿಧರನೆ
ಎತ್ತಿ ಕಡೆ ಹಾಯಿಸೊ ಎನ್ನೊಡೆಯ ಶ್ರೀಹರಿಯೆ ೧

ನಿಂದ ನೆಲ ಮುನಿವುತಿದೆ ನಿಪುಣತನವಡಗಿತು
ಮಂದಮತಿ ವೆಗ್ಗಳಿಸಿ[4] ನೆಲೆಗಾಣೆ ಮುಂದೆ
ತಂದೆ ನೀನಲ್ಲದಿನ್ನಾರು ರಕ್ಷಿಪರಯ್ಯ
ಬಂಧನವ ಪರಿಹರಿಸೊ ಭಯನಿವಾರಣ ಹರಿಯೆ ೨

---

1 ಆಸಕ್ತರು 2 ನಾಲಗೆ 3 ಕಮಲದ ಎಸಳು 4 ಅಧಿಕ

ಕೊಂಡೆಯರ[1] ಕೆಡಮೆಟ್ಟಿ ಕುಹಕಿಗಳ[2] ಮಸ್ತಕವ
ಚೆಂಡಾಡಿದ ಚಿನ್ಮಯರೂಪ ನೀನು
ದಿಂಡರಿದು[3] ದುರುಳರನು ದುರಿತಗಳ ಸಂಹರಿಸಿ
ಪಾಂಡವರಿಗೊಲಿದು ಪಾಲಿಸಿದ್ಯೊ ಪುಂಡರೀಕಾಕ್ಷ ೩

ನಾಲ್ಕು ದಿಕ್ಕಿಗೆ ನಾಲ್ಕು ಪರಿಯ ಬಂಧನದಿಂದ
ವ್ಯಾಕುಲದಿ ಕೃಷ್ಣಾಮೃಗವು[4] ಎದೆಗುಂದಿರೆ
ವಾಕಾರವರಿಸುವ[5] ಸಮಯದಲಿ ವೃಷ್ಟಿ[6]ಯು ಕರೆದು
ಜೋಕೆಯಲಿ ಪಥವನೇರಿಸಿದ್ಯೋ ಜಗದೀಶ ೪

ನಿನ್ನನೆ ಪೂಜಿಪೆನು ನಿನ್ನನೆ ಪಾಡಿ ಪೊಗಳುವೆನು
ನಿನ್ನನೆ ನಂಬಿದ್ದವಳಿಗಿಂಥ
ಉನ್ನತವಾದ ಕಂಟಕವು[7] ಬಂದಿದೆ ಕಾಯೋ
ಪನ್ನಂಗಶಯನ ಹೆಳವನಕಟ್ಟೆ ರಂಗಯ್ಯ ೫

೨೯

ಕಾಯೋ ಕಾಯೋ ಕಾಮಿತಫಲದ ಕಾಯೋ ಪ.

ಕಾಯೋ ಕಾಯೋ ಕಾಯಜನಯ್ಯನೆ
ಕಾಯದಿದ್ದರೆನ್ನ ಕಾವವರಾರೊ ಅ.ಪ.

ಎಂದೆಂದಿನ ಕರ್ಮಗಳೀಸುತಲಿ
ಕಂದಿಸಿ ಕುಂದಿಸಿ ಬಂಧಿಪರೇನೋ ೧

---

1 ಚಾಡಿಕೋರರು 2 ಕಿಡಿಗೇಡಿಗಳು 3 ಕೊಚ್ಚು, ಕತ್ತರಿಸು. 4 ಜಿಂಕೆ
5 ಕಂಗೆಡು, ಬಾಯ್ಬಿಡು (?) 6 ಮಳೆ 7 ಕಷ್ಟ

ತಾಳಲಾರೆ ಈ ಕಲಿಯ ಬಾಧೆಯ ೨
ಬೀಳುವೆ ನಿನ್ನ ಕಾಲಿಗೆ ಸ್ವಾಮಿ

ಆಲಸ ಮಾಡದೆ ಅರ್ತಿ[1]ಗಳೋಡಿಸಿ
ಪಾಲಿಪುದೆನ್ನನು ಪಾವನಮೂರ್ತಿ ೩

ಮಾಡಿದ ಪಾಪಗಳೋಡಿಸಿ ಸುಖದಿಂ–
ದಾಡಿಸು ಕಣ್ಣಿಗೆ ಕಾಣಿಸಿಕೊಂಡು ೪

ವಾಸುದೇವವಿಠಲ ನೀ ಎನಗಿನ್ನು
ವಾಶ (ವಾಸಿ?) ಮಾಡಿಸಿ ಕೀರ್ತಿಯ ಪಡೆಯೊ ೫

---

1 ಅಪೇಕ್ಷೆ

೩೦

ಶ್ರೀರಂಗವಿಠಲನ ಶ್ರೀ ಮಕುಟಕೆ ಶರಣು ಪ.

ಶಿರದಲ್ಲೊಪ್ಪುವ ನೀಲಕುಂತಳಕೆ[1] ಶರಣು
ಸಿರಿಸಹೋದರನ[2]ರ್ಧಲಲಾಟಕೆ[3] ಶರಣು ಅ.ಪ.

ಸೊಂಪು ನೋಟದ ಚೆಲುವ ಸೋಗೆ[4]ಗಣ್ಣಿಗೆ ಶರಣು
ಸಂಪಿಗೆಯ ಕುಸುಮ ಸಮ ನಾಸಿಕಕೆ ಶರಣು
ಗುಂಪು ರತ್ನದ ಕರ್ಣಕುಂಡಲಗಳಿಗೆ ಶರಣು
ಇಂಪು ದರ್ಪಣ[5]ನಿಭ ಕಪೋಲಗಳಿಗೆ ಶರಣು ೧

ಕುಂದ ಕುಟ್ಮಲ[6] ಪೋಲ್ವ ದಂತಪಂಕ್ತಿಗೆ ಶರಣು
ಅಂದವಾಗಿರುವ ಬಿಂಬೋಷ್ಠಕೆ[7] ಶರಣು
ಚಂದ್ರಿಕಾ[8]ನಿಭ ಮುದ್ದು ಮಂದಹಾಸಕೆ ಶರಣು
ನಂದಗೋಪನ ಮುದ್ದು ಕಂದನಿಗೆ ಶರಣು ೨

ಅಬ್ಜನಾಭನ ದಿವ್ಯ ಕಂಬು[9] ಕಂಠಕೆ ಶರಣು
ಅಬ್ಜಮುಖಿಯಿರುವ ವಕ್ಷ[10]ಸ್ಥಳಕೆ ಶರಣು
ಕುಬ್ಜೆಯಾ ಡೊಂಕ ತಿದ್ದಿದ ಭುಜಗಳಿಗೆ ಶರಣು
ಅಬ್ಜಜಾಸನನ ಪೆತ್ತ ನಾಭಿಗೆ[11] ಶರಣು ೩

---

1 ಕಪ್ಪುಗೂದಲು 2 ಚಂದ್ರ 3 ಹಣೆ 4 ನವಿಲು 5 ಕನ್ನಡಿ
6 ಮಲ್ಲಿಗೆ ಮೊಗ್ಗು 7 ತೊಂಡೆಯ ಹಣ್ಣಿನಂತೆ ಕೆಂಪಗಿರುವ ತುಟಿ 8 ಬೆಳದಿಂಗಳು
9 ಶಂಖ 10 ಎದೆ 11 ಹೊಕ್ಕಳು

ರನ್ನಗಂಟೆಗಳಿರುವ ನಿನ್ನ ಕಟಿಗೆ[1] ಶರಣು
ಪೊನ್ನ ಕದಳೀ[2] ಪೋಲ್ವ ತೊಡೆಗಳಿಗೆ ಶರಣು
ಪುನ್ನಾಗಕರಗೆ[3]ತ್ತ ದ್ವಯ ನಿತಂಬಕೆ[4] ಶರಣು
ಚೆನ್ನಾಗಿ ಕುಣಿವ ಸಮಜಾನು[5]ವಿಗೆ ಶರಣು ೪

ಮಂಗಳ ವೈಭೋಗಂಗಳ ಅಂಘ್ರಿ[6]ದ್ವಯಂಕೆ ಶರಣು
ತುಂಗ ಕುಚಗಳ ಪಿಡಿದ ಕರಗಳಿಗೆ ಶರಣು
ಪೊಂಗೊಳಲನೂದುವಾ ಅಂಗುಲಿಗಳಿಗೆ ಶರಣು
ರಂಗವಿಠಲನ ಸರ್ವಾಂಗಕೆ ಶರಣು ೫

## ೨೧

ರಂಗಯ್ಯ ಮನೆಗೆ ಬಂದರೆ ಅಂತ–
ರಂಗದಿ ಗುಡಿ[7]ಕಟ್ಟಿ ಕುಣಿವೆ ನಾ ಪ.

ಎಳೆತುಳಸಿ ವನಮಾಲೆಯು ರಂಗ
ಗೆಳೆನೀಲದ ಮೈಯ ಥಾಳ[8]ವು
ಹೊಳೆವ ಪೊಂಗೊಳಲೊಪ್ಪೆ ಚೆಲುವನು ನಮ್ಮ
ನಿಲಯಕ್ಕೆ ಬಂದ ಭಾಗ್ಯವು ನೋಡ ೧

ಬಾಡಿದ ಮಾವು ಪಲ್ಲವಿಸಿತು[9]—ಹರಿ
ನೋಡಲು ಜಗವು ಭುಲ್ಲವಿಸಿತು[10]
ಕೂಡಿದ ಮನದ ತಾಪಗಳೆಲ್ಲ ಎತ್ತ
ಲೋಡಿತೋ ಹರಿ ಬಂದ ಭರದಿಂದ ನೋಡ ೨

1 ನಡು, ಸೊಂಟ. 2 ಬಾಳೆ 3 ಆನೆಯ ಸೊಂಡಿಲು 4 ಪಿರ್ರ 5 ಮೊಳಕಾಲು 6 ಪಾದ 7 ಬಾವುಟ 8 ಕಾಂತಿ 9 ಚಿಗುರಿತು 10 ಪುಳಕಗೊಂಡಿತು

ಬಿಸಿಲು ಬೆಳದಿಂಗಳಾಯಿತು - ತಾ
ಮಸ[1] ಹೋಗಿ ಜ್ಞಾನೋದಯುವಾಯಿತು
ಕುಸುಮನಾಭನು ತಾ ಬಂದರೆ, ಅಲ್ಲಿ
ವಿಷ ಹೋಗಿ ಅಮೃತವಾಯಿತು ನೋಡ ೩

ಹಾವು ನ್ಯಾವಳ[2]ವಾಯಿತು – ಅಲ್ಲಿ
ದಾವಾನಳ[3] ತಂಪಾಯಿತು
ಬೇವು ಸಕ್ಕರೆ ಆಯಿತು, ನಮ್ಮ
ದೇವಕಿಸುತ ತಾ ಬಂದರೆ ನೋಡ ೪

ಜಾಣೆರರಸ ನೋಡು ರಂಗನು - ಅವ
ತಾನಾಗಿ ಬೆನ್ನ ಬಿಡ ನಮ್ಮನು
ಏನಾದರೂ ಅಗಲದಲೆ ನಮ್ಮ
ಮಾನಾಭಿಮಾನದೊಡೆಯು ಶ್ರೀ ಕೃಷ್ಣ ೫

೩೨

ಸೇರಿದೆನು ಸೇರಿದೆನು ಜಗದೀಶನ ಪ.

ನರಕ ಜನ್ಮದ ಭಯವು ಎನಗಿನಿತಿಲ್ಲ ಅ.ಪ.

ನೇತ್ರಗಳು ಕೃಷ್ಣನ ಮೂರ್ತಿ ನೋಡುತಲಿವೆ
ಶ್ರೋತ್ರ[4]ಗಳು ಹರಿಕಥೆಯು ಕೇಳುತಲಿವೆ
ರಾತ್ರಿ ಹಗಲು ಎನ್ನ ಮನಸು ಶ್ರೀರಂಗನಲ್ಲಿ,
ಪಾತ್ರ[5]ವಾಡುತಿದೆನ್ನ ಗಾತ್ರ[6] ಕೃಷ್ಣನ ಮುಂದೆ

1 ಅಜ್ಞಾನ 2 ಹಾರ, ಸರ, ಮಾಲೆ 3 ಕಾಡುಗಿಚ್ಚು 4 ಕಿವಿ 5 ನರ್ತನ
6 ಶರೀರ

ಹಸ್ತಗಳು ಮಂಟಪ ಶುದ್ಧಿಯನು ಮಾಡುತಿವೆ
ಮಸ್ತಕವು[1] ಹರಿಚರಣಕ್ಕೆರಗುತಿದೆಕೋ
ವಿಸ್ತಾರವಾದ ಪ್ರದಕ್ಷಿಣೆಯ ಮಾಡುತಿದೆ
ಕಸ್ತೂರಿ ತುಳಸಿಯನು ಮೂಗು ಆಘ್ರಾಣಿಸು[2]ತಿದೆ ೨

ಹರಿನಾಮ ಸ್ಮರಣೆಯನ್ನು ಮಾಡುತಿದೆ ಎನ್ನ ಜಿಹ್ವೆ
ಹರಿಭಕುತಿ ಸುಧೆಯ ಪಾನಂಗಳಿಂದ
ಹರಿಪ್ರೀತಿಯಾಗಿದೆ ನೋಡಿದರೆನ್ನ ದೇಹ
ಸಿರಿಕೃಷ್ಣರಾಯನ್ನ ಮನಮಂದಿರದೆ ಕಂಡೆ ೩

೩೩

ಕಂಡೆ ಕಂಡೆನು ಕೃಷ್ಣ ನಿನ್ನಯ ದಿವ್ಯಮಂಗಳ ವಿಗ್ರಹ
ಕಂಡು ಬದುಕಿದೆ ಇಂದು ನಾನು ಕರುಣಿಸೊ
ಎನ್ನೊಡೆಯನೆ ಪ.

ಉಟ್ಟ ದಟ್ಟಿ[3]ಯು ಪಿಡಿದ ವಂಕಿ(ಶಿ?)ಯು ತೊ[4]ಟ್ಟ ಕೌಸ್ತುಭ
ಭೂಷಣ
ಮೆಟ್ಟಿದ ನವರತ್ನದ್ಹಾವಿಗೆ[5] ಇಟ್ಟ ಕಸ್ತೂರಿ ತಿಲಕವ ೧

ಮಂದಹಾಸವು ದಂತಪಂಕ್ತಿಯು ಕುಂದದ ಕಡೆಗಣ್ಣ
ನೋಟವು
ಅಂದವಾದ ಕುರುಳುಗೂದಲು ಮುದ್ದು ಸುರಿವೊ
ಮುಖವ ನಾ ೨

ಮೊಲ್ಲೆ ಮಲ್ಲಿಗೆ ದಂಡೆ ಕೊರಳಲ್ಲಿ ಚೆಲ್ವ ಕಂಕಣ ಕೈಯಲಿ
ಗೊಲ್ಲ ಸತಿಯರ ಕುಚಗಳಲ್ಲಿ ಅಲ್ಲಳಿ[6] ಮಾಡಿ ನಗುವನ ೩

---

1 ತಲೆ 2 ಮೂಸಿನೋಡು 3 ಬಟ್ಟೆ 4 ತೋಳಬಂದಿ (ವಂಶಿ = ಕೊಳಲು)
5 ಪಾದುಕೆ 6 ಪಿಸೋಟ

ಸುರರು ಪುಷ್ಪದ ವೃಷ್ಟಿಯ ಕರೆಯಲು ಅಸುರರೆಲ್ಲರು ಓಡಲು
ಕ್ರೂರ ಕಾಳಿಯ ಫಣ[1]ಗಳಲ್ಲಿ ಧೀರ ಕುಣಿಕುಣಿದಾಡಿದ ೪

ಎನ್ನ ಬಂಧನ ತರಿಸಿದನೆ ಎನ್ನ ಪಾಪವು ಓಡಿತು
ಅನ್ಯದೈವವ ಭಜಿಸಲಾತಕೆ ಮನ್ನಿಸೊ ಹಯವದನನೆ ೫

೩೪

ಕುದುರೆ ಬಂದಿದೆ ಚೆಲುವ ಕುದುರೆ ಬಂದಿದೆ ಪ.

ಕುದುರೆ ಬಂದಿದೆ ವಾದಿರಾಜಗೆ
ಮುದದಿ ಜ್ಞಾನ ಭಕುತಿ ಕೊಡುವ ಅ.ಪ.

ಹಿಂಗಾಲಿಂ ರಕ್ಕಸರ ಒದೆವ ಕುದುರೆ
ಮುಂಗಾಲು ಕೆದರಿ ಜಾಲವ ಬೀಸಿ
ತಗ್ಗಿಸಿ ತಲೆಯ ಅಡಿಗಡಿಗಳಿಗೆ
ಜಿಗಿದು ಹಾರುವ ಹುಂಕರಿಸುವ ೧

ಗರುವಿ ಮಹಲಕ್ಷ್ಮಿ ತನ್ನ
ವರನೆಂದು ಒಲಿದು ಬರುವ
ಉರದಿ ಶ್ರೀವತ್ಸ ಕೌಸ್ತುಭ
ಧರಿಸಿ ತಾ ಮೆರೆಯುವಂಥ ೨

1 ಹೆಡೆ

ಪಲ್ಲಣ[1]ವಿಲ್ಲದೆ ನಿಲ್ವುದು ಕುದುರೆ.
ಒಲ್ಲದು ಕಡಿವಾಣ ಕುದುರೆ
ಬೆಲ್ಲ ಕಡಲೆ ಮೆಲ್ಲುವ ಕುದುರೆ
ಚೆಲುವ ಹಯವದನನೆಂಬೊ ಕುದುರೆ ೩

೩೫

ವರಗುರು ಉಪದೇಶ ನೆರವಾಯಿತೆನಗೀಗ ಇನ್ನೇನಿನ್ನೇನು ಪ.
ಹರಿದಾಸರ ಸಂಗ ದೊರಕಿತು ಎನಗೀಗ ಇನ್ನೇನಿನ್ನೇನು ಅ.ಪ.

ಮಾಯದ ಸಂಸಾರ ಮಮಕಾರ ಹಿಂಗಿತು ಇನ್ನೇನಿನ್ನೇನು
ತೋಯಜಾಕ್ಷ[2]ನ ನಾಮ ಜಿಹ್ವೆಯೊಳ್ನೆಲಸಿತು ಇನ್ನೇನಿನ್ನೇನು ೧

ಹಲವು ದೈವಗಳೆಂಬ ಹಂಬಲು ಬಿಟ್ಟಿತು ಇನ್ನೇನಿನ್ನೇನು
ಜಲಜನಾಭನ ಧ್ಯಾನ ಹೃದಯದೊಳ್ನೆಲಸಿತು ಇನ್ನೇನಿನ್ನೇನು ೨

ತಂದೆ ತಾಯಿ ಮುಚುಕುಂದವರದನಾದ ಇನ್ನೇನಿನ್ನೇನು
ಸಂದೇಹವಿಲ್ಲ ಮುಕುಂದ ದಯಮಾಡ್ದ ಇನ್ನೇನಿನ್ನೇನು ೩

ಏನೆಂದು ಪೇಳಲಿ ಆನಂದ ಸಂಭ್ರಮ ಇನ್ನೇನಿನ್ನೇನು
ಆ ನಂದಗೋಪನ ಕಂದನ ಮಹಿಮೆಯ ಇನ್ನೇನಿನ್ನೇನು ೪

ಎನ್ನ ವಂಶಗಳೆಲ್ಲ ಪಾವನವಾದವು ಇನ್ನೇನಿನ್ನೇನು
ಚಿನ್ಮಯ ಪುರಂದರ ವಿಠಲಯ್ಯ ದೊರಕಿದ ಇನ್ನೇನಿನ್ನೇನು ೫

---

1 ಜೀನು 2 ವಿಷ್ಣು

೩೬

ಅಂತರಂಗದ ಕದವು ತೆರೆಯಿತಿಂದು ಪ.

ಎಂಥ ಪುಣ್ಯದ ಫಲವು ಪ್ರಾಪ್ತಿ ದೊರಕಿತೊ ಎನಗೆ ಅ.ಪ.

ಏಸು[1]ದಿನವಾಯಿತೊ ಬೀಗಮುದ್ರೆಯ ಮಾಡಿ
ವಾಸವಾಗಿದ್ದರೋ ದುರುಳರಿಲ್ಲಿ
ಮೋಸವಾಯಿತು ಇಂದಿನತನಕ ತಮಸಿ[2]ನ
ರಾಶಿಯೊಳಗೆ ಹೂಳಿ[3] ಕಾಣಿಸುತ್ತಿರಲಿಲ್ಲ ೧

ಹರಿಕರುಣವೆಂಬಂಥ ಕೀಲಿ ಕೈ ದೊರಕಿತು
ಗುರುಕರುಣವೆಂಬಂಥ ಶಕ್ತಿಯಿಂದ
ಪರಮ ಭಾಗವತರ ಸಹವಾಸದಲಿ ಪೋಗಿ
ಹರಿಸ್ಮರಣೆಯಿಂದಲ್ಲಿ ಬೀಗಮುದ್ರೆಯ ತೆಗೆದೆ ೨

ಸುತ್ತಲಿದ್ದವರೆಲ್ಲ ಪಲಾಯನವಾದರು
ಭಕ್ತಿ ಕಕ್ಕಡ[4]ವೆಂಬ ಜ್ಞಾನದೀಪ
ಜತ್ತಾಗಿ[5] ಹಿಡಕೊಂಡು ದ್ವಾರದೊಳಗೆ ಪೊಕ್ಕೆ
ಎತ್ತ ನೋಡಿದರತ್ತ ಶೃಂಗಾರ ಸದನ ೩

ಹೊರಗೆ ದ್ವಾರವು ನಾಲ್ಕು[6] ಒಳಗೈದು ದ್ವಾರಗಳು[7]
ಪರದಾರಿಗೆ ಪ್ರಾಣ ಜಯ ವಿಜಯರು
ಮಿರುಗುವೊ ಮಧ್ಯಮ ಮಂಟಪ ಕೋಟಿ ರವಿಯಂತೆ
ಸರಸಿಜನಾಭನ ಅರಮನೆಯ ಸೊಬಗು ೪

---

1 ಎಷ್ಟು 2 ಅಜ್ಞಾನ 3 ಹೂತು ಹೋಗಿ 4 ಜ್ಯೋತಿ, ದೀವಿಗೆ
5 ಜೋಪಾನ 6 ಹೃದಯ ಮಂಟಪದ ನಾಲ್ಕು ದಿಕ್ಕುಗಳ ದ್ವಾರ
7 'ಪ್ರಾಣೋಪಾನ ವ್ಯಾನೋಡಾನ ಸಮಾನ'ವೆಂಬ ದ್ವಾರಪಾಲಕರಾದ ಪಂಚ ಪ್ರಾಣಗಳು ಮತ್ತು ಈ ಲೆಕ್ಕದಲ್ಲಿ ಊರ್ಧ್ವಭಾಗವೂ ಸೇರುತ್ತದೆ.

ಸ್ವಮೂರ್ತಿಗಣ ಮಧ್ಯೆ ಸಚ್ಚಿದಾನಂದೈಕೆ
ರಮೆಧರೆಯರಿಂದಲಾಲಿಂಗತ್ವದಿ
ಕಮಲಜಾದಿಗಳಿಂದ ತುತಿಸಿ[1]ಕೊಳ್ಳುತ ಹೃದಯ
ಕಮಲದೊಳಗಿರುವ ಶ್ರೀ ವಿಜಯ ವಿಠಲನ ಕಂಡೆ ೫

೩೭

ಸ್ವಾನಂದದ ಸುಖ ಏನೆಂದ್ಹೇಳಲಿ ಕೌತುಕ ಧ್ರುವ

ಒಡೆದು ಹೇಳುವುದಲ್ಲ ಹಿಡಿದು ತಾ ಕೊಡಲಿಕ್ಕಿಲ್ಲ
ಪಡೆದುಕೊಂಡವನೆ ಬಲ್ಲ ಗೂಡಿನ ಸೊಲ್ಲ ೧

ಸಕ್ಕರಿ ಸವಿದಂತೆ ಮೂಕ ಪ್ರಕಟಿಸೇನೆಂದ್ಹರೆ ಸುಖ
ಯುಕುತಿಗೆ ಬಾರದ ನಿಶ್ಶಂಕ ಸುಖ ಅಲೌಕಿಕ ೨

ಮುನಿಜನರ ಹೆಜ್ಜೆಮೆಟ್ಟು ಏನೆಂದ್ಹೇಳಲಿ ನಾ ಗುಟ್ಟು
ಅನುದಿನ ಮಹಿಪತಿ ಗುಟ್ಟು ಘನ ಕೈಗೊಟ್ಟು ೩

೩೮

ಕೃಷ್ಣನ ನೋಡಿದೆ ಸರ್ವೋತ್ಕೃಷ್ಟನ ಪಾಡಿದೆ ಪ.
ಕೃಷ್ಣನ ನೋಡಿ ಸಾಷ್ಟಾಂಗ[2]ವ ಮಾಡಿದೆ
ಕಷ್ಟವ ಪರಿಹರಿಸಿಪ್ಪವನೀವನ ಅ.ಪ.

---

1 ಕೊಂಡಾಡುವುದು. 2 ಉರಸ್ಸು, ಶಿರಸ್ಸು, ದೃಷ್ಟಿ, ಮನಸ್ಸು, ವಚಸ್ಸು, ಪಾದಗಳು, ಕರಗಳು, ಜಾನುಗಳು.

ಶಿಷ್ಟನ ನೋಡಿದೆ ವರ ನಿರ್ದಿಷ್ಟನ ನೋಡಿದೆ
ಹೃಷ್ಟ ಪುಷ್ಟ ಸಂತುಷ್ಟನ ಶ್ರೇಷ್ಠನ
ಶಿಷ್ಟರ ಹೃದಯಂ ಸಂವಿಷ್ಟನ ಇಷ್ಟನ ೧

ರಂಗನ ನೋಡಿದೆ ದೇವೋತ್ತುಂಗನ ನೋಡಿದೆ
ಅಂಗ ಸಿಂಗ ಕಾಳಿಂಗ ಮರ್ದನ
ಮಂಗಳಾಂಗ ಭವಭಂಗನ ನೋಡಿದೆ ೨

ದೇವನ ನೋಡಿದೆ ಮುಕ್ತಿ ಈವನ ನೋಡಿದೆ
ಗೋವಕಾವ ಭೂದೇವ ವಂದಿತಬಲ
ದೇವಾನುಜ ಹಯಗ್ರೀವನ ನೋಡಿದೆ ೩

ಬಾಲನ ನೋಡಿದೆ ಲಕುಮಿಲೋಲನ ನೋಡಿದೆ
ಶೀಲ ಶೂಲಧರಪಾಲ ಲೀಲ ಶಿಶು
ಪಾಲಕಾಲ ವನಮಾಲನ ನೋಡಿದೆ ೪

ಧೀರನ ನೋಡಿದೆ ಗುಣಗಂಭೀರನ ನೋಡಿದೆ
ವೀರಶೂರ ಪರಾತ್ಪರ ವರ ಅ
ಕ್ರೂರವರದ ಸಿರಿಧರನ ನೋಡಿದೆ ೫

ಶ್ಯಾಮನ ನೋಡಿದೆ ಬಲು ನಿಸ್ಸೀಮನ ನೋಡಿದೆ
ವಾಮನ ಭಾಮನ[1] ಕಾಮನೈಯನ
ಸಾಮನ[2] ಸೀಮನ[3] ಸೋಮನ ನೋಡಿದೆ ೬

ಜಾಣನ ನೋಡಿದೆ ಬಲು ಪ್ರವೀಣನ ನೋಡಿದೆ
ಪ್ರಾಣನ ಪ್ರಾಣನ ಗುಣಗಣಮಂಡಿತ
ವೇಣುಗೋಪಾಲ ವಿಠಲ ಕಲ್ಯಾಣನ ೭

---

1 ಪ್ರಕಾಶಿಸುವವನು 2 ಸಾಮವೇದಗಮ್ಯ 3 ಧರ್ಮದ ಮೇರೆ ವಿಧಿಸುವವನು

೩೯

ಧನ್ಯನಾದೆ ವಿಠಲನ ಕಂಡು ಪ
ಧನ್ಯನಾದೆ ಕಾಮನ್ನ ಪಿತನ ಲಾ
ವಣ್ಯಮೂರುತಿಯ ಕಣ್ಣಲಿ ಕಂಡು ಅ.ಪ.

ದೇವವರೇಣ್ಯ ಸದಾ ವಿನೋದಿ ವೃಂ
ದಾವನ ಸಂಚರಿ ಓವನ[1] ಕಂಡು ೧

ಮಂಗಳಾಂಗ ಕಾಳಿಂಗಮಥನ ಮಾ
ತಂಗ[2]ವರದ ವರ ರಂಗನ ಕಂಡು ೨

ಹಾಟಕಾಂಬರ[3] ಕಿರೀಟಿ ಸಾರಥಿ
ತಾಟಕಾರಿ ವೈರಾಟನ ಕಂಡು ೩

ಚಿಂತಿತ ಫಲದ ಕೃತಾಂತನಾತ್ಮಜಾ
ದ್ಯಂತರಹಿತ ನಿಶ್ಚಿಂತನ ಕಂಡು ೪

ಮಾತುಳಾಂತಕ[4] ವಿಧಾತ ಪಿತ ಜಗ
ನ್ನಾಥ ವಿಠಲ ವಿಖ್ಯಾತನ ಕಂಡು ೫

೪೦

ಕಂಡೆನೀಗ ರಂಗನಾಥನ ಕಾರುಣ್ಯನಿಧಿಯ
ಕಂಡೆನೀಗ ರಂಗನಾಥನ
ಮಂಡಲದೊಳುದ್ದಂಡ ಮೂರುತಿ
ಹಿಂಡು ಹಿಂಡು ದೈತ್ಯರ ತಂಡ ತಂಡದಿ
ತುಂಡು ತುಂಡು ಮಾಡಿದ ಸ್ವಾಮಿಯಾ ಪ

---

1 ಪ್ರೀತಿಪಾತ್ರ 2 ಆನೆ 3 ಜರತಾರಿಬಟ್ಟೆ 4 ಕಂಸಮರ್ದನ

ಕಾಮಪಿತನ ಕೌಸ್ತುಭಹಾರನ ಕಸ್ತೂರಿ
ನಾಮವ ನೇಮದಿಂದ ಧರಿಸಿದಾತನ
ವಾಮ[1]ಭಾಗ ಲಕ್ಷ್ಮೀಸಹಿತ ಹೇಮ[2]ಮಂಟಪದೊಳಗೆ ಕುಳಿತು
ಕಾಮಿಸಿದ ಭಕ್ತರಿಗೆ ಕಾಮಿತಾರ್ಥ ಕೊಡುವ ಸ್ವಾಮಿ ೧.

ಗರುಡವಾಹನವೇರಿ ಗಮಕದಿ ಚರಿಸುತ ಬಂದು
ಸರಸಿಯೊಳು ಕರಿಯ ಸಲಹಿದಿ
ಪರಮಭಕ್ತರ ವಾಸುದೇವ ಅರುಣವಾರಿಧಿಕಮಲನಯನ
ಉರಗಶಯನ ಉದ್ಧಾರಿ ನಿನ್ನ ಮೊರೆಯ ಹೊಕ್ಕೆ ಕಾಯೋ ಎನ್ನ ೨

ಇಂದುಧರನ ಸಖನೆ ಕೇಳಯ್ಯ, ಬಂದಂಥ ದುರಿತ
ಹಿಂದುಮಾಡಿ ಮುಂದೆ ಸಲಹಯ್ಯ
ತಂದೆಯಡಿಯ ಹೊಂದಿದೆನು ಇಂದು ಹೆಳವನಕಟ್ಟೆರಂಗ ಆ
ನಂದಪಡಿಸೊ ರಾಮಲಿಂಗ, ಹೊಂದಿದೆನು ನಿನ್ನ ಚರಣ ೩

1 ಎಡ 2 ಚಿನ್ನ

## ದಾಸ್ಯಭಾವ

### ೪೧

ನಾ ನಿನಗೇನು ಬೇಡುವುದಿಲ್ಲ–ಎನ್ನ
ಹೃದಯ ಕಮಲದೊಳು ನೆಲಸಿರು ಹರಿಯೆ ಪ.

ಶಿರ ನಿನ್ನ ಚರಣಕ್ಕೆರಗಲಿ–ಚಕ್ಷು[1]
ಎರಕ[2]ದಿಂದಲಿ ನಿನ್ನ ನೋಡಲಿ ಹರಿಯೆ
ಕರಣ ಗೀತಂಗಳ ಕೇಳಲಿ–ನಾಸಿಕ
ನಿರುಪಮಾಲ್ಯಾನುದಿನ ಘ್ರಾಣಿಸಲಿ ಹರಿಯೆ ೧

ನಾಲಿಗೆ ನಿನ್ನ ಕೊಂಡಾಡಲಿ–ಎನ್ನ
ತೋಳು ಕರಂಗಳ ಮುಗಿಯಲಿ ಹರಿಯೆ
ಕಾಲುಂ ತೀರ್ಥಯಾತ್ರೆಗೆ ಪೋಗಲಿ–ಮನ
ಬಲ್ಪಿ[3]ನಿಂದಲಿ ನಿನ್ನ ಸ್ಮರಿಸಲಿ ಹರಿಯೆ ೨

ಚಿತ್ತ ನಿನ್ನೊಳು ಮುಳುಗಾಡಲಿ–ನಿನ್ನ
ಭಕ್ತ ಜನರ ಸಂಗ ದೊರಕಲಿ ಹರಿಯೆ
ವೃತ್ತಿ ತತ್ವಯೋಗಾಭ್ಯಾಸಕ್ಕಾಗಲಿ–ರಂಗ
ವಿಠಲ ನಿನ್ನ ದಯವಾಗಲಿ ಹರಿಯೆ ೩

---

1 ಕಣ್ಣು 2 ಪ್ರೇಮ 3 ಬಲವಾಗಿ

೪೨

ಇಟ್ಹಾಂಗೆ ಇರುವೆನೋ ಹರಿಯೆ ಎನ್ನ ದೊರೆಯೆ ಪ.
ಸೃಷ್ಟಿವಂದಿತ ಪಾದಪದುಮ ಶ್ರೀಹರಿಯೆ ಅ.ಪ.

ಸಣ್ಣ ಶಾಲ್ಯೋದನ[1] ಬೆಣ್ಣೆ ಕಾಸಿದ ತುಪ್ಪ
ಚಿನ್ನದ ಹರಿವಾಣ[2]ದಲಿ ಭೋಜನ
ಘನ್ನ ಮಹಿಮ ನಿನ್ನ ಕರುಣ ತಪ್ಪಿದ ಮ್ಯಾಲೆ ಕ
ದನ್ನ[3] ಕಾಣದೆ ಬಾಯ್ಬಿಡಿಸುವಿ ಹರಿಯೆ ೧

ಕೆಂಪಿಲಿ ಪೊಳೆವ ಪೀತಾಂಬರ ಉಡಿಸುವಿ
ಸೊಂಪಿನಂಚಿನ ಶಾಲು ಹೊದಿಸುವಿಯೋ
ಕಪಿಲಹರೇ[4] ನಿನ್ನ ಕೃಪೆಯು ತಪ್ಪಿದ ಮ್ಯಾಲೆ
ಕಪರ್ದಕ[5] ಕೌಪೀನವು ದೊರೆಯದೊ ಹರಿಯೆ ೨

ಚಂದ್ರಶಾಲೆಲಿ[6] ಚಂದ್ರಕಿರಣದಂತೊಪ್ಪುವ
ಚಂದದ ಮಂಚದೊಳ್ಮಲಗಿಸುವಿ
ಮಂದರೋದ್ಧರ ನಿನ್ನ ಮಮತೆ ತಪ್ಪಲು ಧರ್ಮ
ಮಂದಿರ[7]ದೊಳು ತೋಳ್ತಲಗಿಂಬು ಹರಿಯೆ ೩

ನರಯಾನ[8]ದೊಳು ಕ್ಷಣ ನರವರನೆನಿಸುವಿ
ವರ ಛತ್ರ ಚಾಮರ ಹಾಕಿಸುವಿ
ಕರುಣಾನಿಧೇ ನಿನ್ನ ಕರುಣ ತಪ್ಪಿದ ಮ್ಯಾಲೆ
ಚರಣರಕ್ಷೆ[9]ಯು ದೊರೆಯದೊ ಹರಿಯೆ ೪

---

1 ಸಣ್ಣಕ್ಕಿ ಅನ್ನ 2 ತಟ್ಟೆ 3 ಹಂಜಕ್ಕಿ ಅನ್ನ 4 ಕಪಿಲಾವತಾರಿಯಾದ ವಿಷ್ಣು 5 ಕವಡೆ 6 ಸೊಗಸಾದ ಆವಾಸ 7 ಛತ್ರ 8 ಪಲ್ಲಕ್ಕಿ 9 ಪಾದರಕ್ಷೆ.

ಗಂಗಾಜನಕ ಪಾಂಡುರಂಗ ನಿನ್ನಯ ಭಕ್ತ
ಸಂಗವಿರಲಿ ದುಷ್ಟ ಸಂಗ ಬ್ಯಾಡ
ಅಂಗನೆಯರ ಕೂಡಿ ಅನಂಗಬಾಣ[1]ಕೆ ಸಿಲುಕಿ
ಭಂಗವ ಪಡಲಾರೆ ಶ್ರೀರಂಗವಿಠಲ ಹರಿಯೆ ೫

೪೩

ನಿನ್ನಾಜ್ಞಾದವನೊ ನಾನೆನ್ನನೊಪ್ಪಿಸಿದೆ
ಬಿನ್ನಹ ಚಿತ್ತೈಸಿ ಎನ್ನ ಪಾಲಿಸೊ ಕೃಷ್ಣ ಪ.

ಏಳು ಸುತ್ತಿನ ಕೋಟೆ ಯಮನಾಳು ಮುತ್ತಿಕೊಂಡು
ಪಾಳು ಮಾಡೇವೆಂದು ಪೇಳುತಿರಲು
ಆಳು ಸಾಮಗ್ರಿಯು ಅಪಾರ ಬಲ ಮಾಡಿ
ಕೋಳುಹೋಗ[2]ದ ಮುನ್ನ ಕೋಟೆ ರಕ್ಷಿಸಬೇಕು ೧

ಆರು[3] ಮೂರರ[4] ಬಾಧೆ ಆರು[5] ಎಂಟರ[6] ಬಾಧೆ
ಕ್ರೂರರೈವರ[7]ಬಾಧೆ ಹೋರುತಲಿದಕೊ
ಆರಿಂದ ನಿರ್ವಾಹವಾಗದು, ಇವರನು
ಮೀರಲಿಡುವನೊಬ್ಬ ಧೀರನ್ನ ಬರಮಾಡೊ ೨

ಲಕ್ಷ ಎಂಬತ್ತುನಾಲ್ಕು ಜೀವರಾಶಿಗಳೊಳು
ಸೂಕ್ಷ್ಮದ ಕೋಟೆಂದುಪೇಕ್ಷಿಸದೆ
ಪಕ್ಷಿವಾಹನ ನೀನು ಪ್ರತ್ಯಕ್ಷ ನಿಂತರೆ
ಅಕ್ಷಯ ಬಲವೆನಗೆ ರಕ್ಷಿಸೊ ಸಿರಿಕೃಷ್ಣ ೩

---

1 ಮನ್ಮಥನ ಬಾಣ 2 ಸೂರೆ ಮಾಡು 3 ಷಡ್ರಿಪುಗಳು 4 ತಾಪತ್ರಯ
5 ಷಡೂರ್ಮಿಗಳು (ಕ್ಷುಧೆ, ತೃಷೆ, ಶೋಕ, ಮೋಹ, ಜರೆ, ಮೃತ್ಯು)
6 ಅಷ್ಟಮದಗಳು 7 ಪಂಚೇಂದ್ರಿಯಗಳು

೪೪

ಎಂದಿಗಾದರೂ ಒಮ್ಮೆ ಕೊಡು ಕಂಡ್ಯ ಹರಿಯೆ ಪ.

ಬೃಂದಾವನಪತಿ ದಯದಿಂದಲೆನಗೆ ಅ.ಪ.

ಫಲಭಾರಗಳಿಂದ ತಲೆವಾಗಿ ಶುಕ[1]ಪಿಕ[2]
ಕಲಕಲದೊಳು ನಿನ್ನ ತುತಿಸಿ[3] ತುಂಬಿಗಳ
ಗಳ[4]ರವದಿಂ ಪಾಡಿ ಅಪ್ಸರರಂತೆ ಪೂ
ಮಳೆಯುಗರೆವ ತರುಲತೆಯ ಜನ್ಮವನು ೧

ಕೊಳಲ ಶ್ರುತಿಯ ಕೇಳಿ ಸುಖದ ಸಂಭ್ರಮದಲಿ
ಹೊಲಬು[5] ತಪ್ಪಿ ತಾವು ಅರೆಗಣ್ಣು ಮುಚ್ಚಿ
ನಳಿನಾಸನದಿ ಮೌನಗೊಂಡು ಪರಮಹಂಸ
ಕುಲದಂತೆ ಧ್ಯಾನಿಪ ಹಂಸಜನ್ಮವನು ೨

ನಖಗಳೆಂಬ ಸಂತತ ಪೂರ್ಣಚಂದ್ರನ್ನ
ಅಕಳಂಕ[6] ನವಚಂದ್ರಿಕೆ[7]ಯನ್ನು ಸವಿದು
ಸುಖದ ಸುಗ್ಗಿಗಳಲ್ಲಿ ಸೊಕ್ಕಿ ಯೋಗಿಗಳಂತೆ
ಅಖಿಳವ ಮರೆದ ಚಕೋರ ಜನ್ಮವನು ೩

ಭಾವಜನಯ್ಯ[8]ನ ಕಡು ಚೆಲ್ವಿಕೆಯನ್ನು
ಭಾವಿಸಿ ನಿಡುಗಂಗಳಿಂದ ದಣಿದುಂಡು
ಗೋವಳೇರಂತೆ ಮನೆಮಕ್ಕಳ ಹಿಂಗಿ ನಿನ್ನ
ಆವಾಗ ಈಕ್ಷಿಸುವ ಗೋವ್ಗಳ ಜನ್ಮವನು ೪

---

1 ಗಿಳಿ 2 ಕೋಗಿಲೆ 3 ಕೊಂಡಾಡಿ 4 ಕಂಠ 5 ದಾರಿ 6 ನಿರ್ದೋಷ
7 ಬೆಳದಿಂಗಳು 8 ಮನ್ಮಥನ ತಂದೆ

ತೋಳದಂಡಿ[1]ಗೆ ಮಾಡಿ ಹೀಲಿಯ[2] ಚಾಮರವ
ಮೇಲೆ ಎತ್ತಿದ ತಾವರೆಗೊಡೆಯಿಂದ
ಓಲೈಸಿ ನಿನ್ನನು ಒಲಿಸಿ ಮುಕುತರಂತೆ
ಸಾಲೋಕ್ಯ ಸುಖವುಂಬ ಗೋಪರ ಜನ್ಮವನು ೫

ಕೊಳಲ ಧ್ವನಿಯ ಕೇಳಿ ಎದುರುಗೊಳ್ಳುತ ನಿನ್ನ
ನಳಿನನಾಭಾ ಅವಧಾರೆಂ[3]ದು ಪೊಗಳೇ
ತಳಿಗೆ[4] ಆರತಿಯೆತ್ತಿ ಲಕ್ಷ್ಮಿಯಂತೆ ನಿನ್ನ
ಚೆಲುವ ಸವಿವಂಥ ಗೋಪೇರ ಜನ್ಮವನು ೬

ಇಂದಿರೆಯರಸ ಬ್ರಹ್ಮೇಂದ್ರಾದಿ ವಂದಿತ
ಎಂದು ಮೊಸರ ಕಡೆಯುತ್ತಲಿ ನಿನ್ನ
ಅಂದಿನ ಶ್ರುತಿಯೋಲುಪ್ಪವಡಿಪ ವ್ರಜ
ದಿಂದುಮುಖಿಯರ ಜನ್ಮವ ಸಿರಿಕೃಷ್ಣ ೭

೪೫

ಆಳಿದ ನೀನು ನಿನ್ನಾಳು ನಾನು
ತಂದೆ ನೀನು ನಿನ್ನ ಕಂದ ನಾನು
ಶರಣ್ಯ ನೀನು ನಿನ್ನ ಶರಣಾಗತ ನಾನು
ದಯಾಳು ನೀನು ನಿನ್ನ ದಯಕೆ ಪಾತುರ ನಾನು
ನೋವ ನೋಡಿನ್ನು ಕಾವರಿಲ್ಲೆಂದು
ಶ್ರೀಕೃಷ್ಣ ಎನ್ನನು ಕಾಯಬೇಕೈ ತಂದೆ
ಆಳಿದ ನೀನು ನಿನ್ನಾಳು ನಾನು

(ಸುಳಾದಿಯಿಂದ)

---

1 ಪಲ್ಲಕ್ಕಿ 2 ನವಿಲುಗರಿ 3 ಪರಾಕು 4 ತಟ್ಟೆ

೪೩

ಬಿಡೆನೊ ಬಿಡೆನೊ ನಿನ್ನ ಚರಣ ಕಮಲವ, ಎನ್ನ
ಹೃದಯ ಮಧ್ಯದೊಳಿಟ್ಟು ಭಜಿಸುವೆ ಅನುದಿನ ಪ.

ಬಲಿಯ ದಾನವ ಬೇಡಿ ಅಳೆಯೆ ಬ್ರಹ್ಮಾಂಡವ
ಪದುಮನಾಭನೆ ನಿನ್ನ ಪಾದ ಸೋಕಲಾಗಿ
ಉಗುರ ಕೊನೆಯಿಂದ ಉದಿಸಿದಳಾ ಗಂಗೆ
ಹರಿಪಾದತೀರ್ಥವೆಂದು ಹರ ಧರಿಸಿದನಾಗ ೧

ಆ ಪತಿ ಶಾಪದಿ ಅಹಲ್ಯೆ ಸಾವಿರಯುಗ
ಪಾಷಾಣ[1]ವಾಗಿ ಪಥದೊಳಿರಲು
ದೇವ ನಿನ್ನಯ ಪಾದ ಸೋಂಕಿದಾಗಲೆ
ಸತಿ ಪಡೆದಳು ದಿವ್ಯ ದೇಹವನು ೨

ವಜ್ರಾಂಕುಶ ಧ್ವಜ ಪದ್ಮರೇಖೆಗಳಿಂದ ಒಪ್ಪುವ
ಸಿರಿಪಾದ ಪದುಮವನು
ಭಕ್ತಿಯಿಂದ ಭಜಿಸಲು ಸಿರಿ ಹಯವದನನೆ
ಪ್ರತ್ಯಕ್ಷವಾಗಿ ಸಲಹುವ ನಮ್ಮನು ೩

೪೭

ಎನ್ನನುದ್ಧರಿಸಲಾಗದೆ ಚೆನ್ನರಾಯ ಪ.

ಎನ್ನನುದ್ಧರಿಸಲಾಗದೆ ಚೆನ್ನರಾಯ ಬಿನ್ನೈಸುವೆ
ಇನ್ನು ಬೇರೆ ಗತಿಯು ಕಾಣೆ ನಿನ್ನ ಚರಣಕಮಲದಾಣೆ ಅ.ಪ.

---

1 ಕಲ್ಲು

ಶರಣಜನರ ಪಾಲ ಕಲ್ಪತರು ಗುರುಸ್ವರೂಪನೆಂದು
ಧರೆಯೊಳಖಿಳ ನಿಗಮ ಉಸುರುತಿರಲು ಎನ್ನ
ಚರಣವನ್ನು ಶಿರದೊಳಾಂತೆ ಎನ್ನಮೇಲಣ
ಕರುಣವಿಲ್ಲದುದೇನು ಕಾರಣ, ಸಲಹಬೇಕು
ಸುರರ ಮಸ್ತಕದ ಸುಭೂಷಣ ೧

ಹಿಂದೆ ನಾ ಅನಾಥನಾಗಿ ಒಂದೆರಡಲ್ಲ ಅನೇಕ ಜನ್ಮದಿ
ಬಂದು ನರಕಯಾತನೆಯಲ್ಲಿ ನೊಂದುಬೆಂದು ಬಾಯ್ಬಿಡುತ
ಬಂದೆ ನಿನ್ನ ಪೆಸರುಗೊಂಡೆನು ಸನಾಥನಾಗಿ
ಮುಂದೆ ನಾಮಸುಧೆಯನುಂಡೆನೊ ನೀ ಕೃಪಾಳು
ಎಂದು ನುಡಿವರನ್ನು ಕಂಡೆನೊ ೨

ಹಲವು ಮಾತನಾಡಲೇನು ಒಲಿವುದಿನ್ನು ಹರಿಯೆ ನಿನ್ನ
ಸಲಿಗೆಯೊಳೀ ಬಿನ್ನಪವನು ಸಲಿಸುತಿಹೆನು ಮುಂದಕಿನ್ನು
ಜಲುಮ ಬಾರದಂತೆ ವರವನು ಇತ್ತು ಎನ್ನ
ಸಲಹೊ ದೊರೆಯೆ ನಿನ್ನ ಕರೆವೆನೊ ಮುಂದೆ ಮುಕುತಿ
ಲಲನೆಯೊಡನೆ ಸುಖದಲಿರುವೆನು ೩

ದೇಶವರಿಯೆ ನಾನು ನಿನ್ನ ದಾಸನೆಂದು ಡಂಗುರವನು ಹೊ
ಯಿಸಿ ತಿರುಗುತಿರಲು ಮೋಹಪಾಶವೆನ್ನ ಸುತ್ತಿಕೊಂಡು
ಘಾಸಿಮಾಡುತಿರಲು ಬಿಡಿಸದೆ ಇರುವ ಪಂಥ
ವಾಸಿಯೇನು ಇನ್ನು ಅಲೆಸದೆ ಸಲಹೊ ಸ
ರ್ವೇಶ ನಂಬಿದವನ ಕೆಡಿಸದೆ ೪

ಎನ್ನ ದುರ್ಗುಣವನ್ನು ಮರೆದು ನಿನ್ನ ಸದ್ಗುಣದಿ ಪೊರೆದು
ಮನ್ನಿಸಿದರೆ ಲೋಕದೊಳಗೆ ಧನ್ಯನಹೆನು ಜನುಮವೆತ್ತಿ
ಉನ್ನತಾಹುದು ನಿನ್ನ ಕೀರುತಿ, ನಾಶವಹುದು
ಎನ್ನ ಭವದ ಬಹಳ ಧಾವತಿ[1], ಸಲಹೊ
ಚೆನ್ನ ಹಯವದನಮೂರುತಿ ೫

೪೮

ಮಧುಕರವೃತ್ತಿ[2] ಎನ್ನದು ಅದು ಬಲು ಚೆನ್ನದು ಪ.

ಪದುಮನಾಭನ ಪಾದಪದುಮ ಮಧುಪವೆಂಬ ಅ.ಪ.

ಕಾಲಿಗೆ ಗೆಜ್ಜೆ ಕಟ್ಟಿ ನೀಲವರ್ಣನ ಗುಣ
ಆಲಾಪಿಸುತ್ತ ಬಲು ಓಲಗ ಮಾಡುವಂಥ ೧

ರಂಗನಾಥನ ಗುಣ ಹಿಂಗದೆ ಪಾಡುತ್ತ
ಶೃಂಗಾರ ನೋಡುತ್ತ ಕಂಗಳಾನಂದವೆಂಬ ೨

ಇಂದಿರಾಪತಿ ಪುರಂದರವಿಠಲನಲ್ಲಿ
ಚಂದದ ಭಕ್ತಿಯಿಂದಾನಂದಪಡುವಂಥ ೩

೪೯

ತೇಲಿಸೋ ಇಲ್ಲ ಮುಳುಗಿಸೋ–ನಿನ್ನ
ಪಾಲಿಗೆ ಬಿದ್ದೆನೊ ಪರಮ ಕೃಪಾಳೊ ಪ.

---

1 ತೊಂದರೆ 2 ಮಾಧುಕರವೃತ್ತಿ 3 ಮುಂಬ

ಸತಿ ಸುತ ಧನದಾಸೆ ಎಂತೆಂಬ ಮೋಹದಿ
ಹಿತದಿಂದ ಅತಿ ನೊಂದು ಬೆಂಡಾದೆನೊ
ಗತಿ ಕೊಡುವರ ಕಾಣೆ ಮತಿಯ ಪಾಲಿಸೊ ಲಕ್ಷ್ಮೀ
ಪತಿ ನಿನ್ನ ಚರಣದ ಸ್ಮರಣೆಯಿತ್ತೆನಗೆ ೧

ಜರೆ[1]ರೋಗ ದಾರಿದ್ರ್ಯ ಕಶ್ಮಲವೆಂತೆಂಬ
ಶರಧಿ[2]ಯೊಳಗೆ ಬಿದ್ದು ಮುಳುಗಿದೆನೊ
ಸ್ಥಿರವಲ್ಲ ದೇಹವು ನೆರೆ ನಂಬಿದೆ ನಿನ್ನ
ಕರುಣಾಭಯವಿತ್ತು ಪಾಲಿಸೊ ಹರಿಯೆ ೨

ದೋಷವುಳ್ಳವ ನಾನು ಭಾಷೆ[3]ಯುಳ್ಳವ ನೀನು
ಮೋಸ ಹೋದೆನೊ ಭಕ್ತಿರಸವ ಬಿಟ್ಟು
ಶೇಷಶಯನ ಶ್ರೀಪುರಂದರವಿಠಲನೆ
ದಾಸರ ಸಂಗವಿತ್ತು ಪಾಲಿಸೊ ಹರಿಯೇ ೩

೫೦

ದೃಷ್ಟಿ ನಿನ್ನ ಪಾದದಲ್ಲಿ ನೆಡೊ ಹಾಂಗೆ
ದುಷ್ಟಜನಸಂಗಗಳ ಬಿಡೊ ಹಾಂಗೆ ಪ.

ಕೆಟ್ಟ ಮಾತು ಕೇಳಿ ಕಿವಿ ಕೊಡದ್ಹಾಂಗೆ—ಮನ
ಕಟ್ಟಿಸಯ್ಯ ನಿನ್ನ ಪಾದ ಬಿಡದ್ಹಾಂಗೆ ಅ.ಪ.

---

1 ಮುಪ್ಪು 2 ಸಮುದ್ರ 3 ವಾಗ್ದಾನ

ದಿಟ್ಟನಾಗಿ ಕೈಯನೆತ್ತಿ ಕೊಡೋ ಹಾಂಗೆ
ಶ್ರೀಕೃಷ್ಣ ನಿನ್ನ ಪೂಜೆಗಳ ಮಾಡೊ ಹಾಂಗೆ
ಭ್ರಷ್ಟನಾಗಿ ನಾಲ್ವರೊಳಗೆ ತಿರುಗದ್ಹಾಂಗೆ
ಶಿಷ್ಟಜನ ಸೇವೆಯನು ಮಾಡೊ ಹಾಂಗೆ ೧

ಪುಟ್ಟಿಸಿದ ತಾಯಿತಂದೆಯುಲ್ಲೊ ನೀನು
ಹೊಟ್ಟೆಗಾಗಿ ದೈನ್ಯಪಡಲಾರೆ ನಾನು
ಪಟ್ಟೆ ಪಟ್ಟುವಾಳಿ[1] ಬೇಡಲಿಲ್ಲ ನಾನು
ಗುಟ್ಟು ಅಭಿಮಾನಗಳ ಕಾಯೊ ನೀನು ೨

ನಟ್ಟ ನೀರೊಳಗೆ ಈಸಲಾರೆ ನಾನು
ಕಟ್ಟೆ ಸೇರಿಸಬೇಕಯ್ಯ ನೀನು
ಕಟ್ಟೆ ಕಾಣದೆ ಅಲ್ಲಾಡುವೆನು ನಾನು ಕೈಯ
ಬಿಟ್ಟು ನೋಡಂವರೆ ಪುರಂದರವಿಠಲ ನೀನು ೩

೫೧

ನೀನೆ ಅನಾಥ ಬಂಧು, ಕಾರುಣ್ಯ ಸಿಂಧು ಪ.

ಮಂದಗಜವೆಲ್ಲ ಕೂಡಿದರೇನು
ಆದರ ವ್ಯಾಳ್ಯಕೆ[2] ಒದಗಲಿಲ್ಲ
ಮದನನಯ್ಯ ಮಧುಸೂದನ ಎನ್ನಲು
ಮುದದಿಂದಲಿ ಬಂದೊದಗಿದೆ ಕೃಷ್ಣ ೧

---

1 ರೇಷ್ಮೆ ವಸ್ತ್ರ 3 ಸಮಯ

ಪತಿಗಳೈವರಿದ್ದರೇನು
ಸತಿಯ ಭಂಗ ಬಿಡಿಸಲಿಲ್ಲ
ಗತಿ ನೀನೇ ಮುಕುಂದ ಎನ್ನಲು
ಅತಿ ವೇಗದಲಿ ಅಕ್ಷಯವಿತ್ತೆ ಕೃಷ್ಣ ೨

ಶಿಲೆಯ ರಕ್ಷಿಸಿ ಕುಲಕೆ ತಂದೆ
ಬಲಿಗೆ ಒಲಿದು ಪದವಿಯನಿತ್ತೆ
ಸುಲಭದಿ ಭಕ್ತರ ಸಲಹುವ ನಮ್ಮ
ಚೆಲುವ ಪುರಂದರವಿಠಲರಾಯ ೩

೫೨

ನಾನೇಕೆ ಬಡವನು ನಾನೇಕೆ ಪರದೇಶಿ
ಶ್ರೀನಿಧೇ ನೀನಿರುವತನಕ ಹರಿಯೆ ಪ.

ಪುಟ್ಟಿಸಿದ ತಾಯಿ ತಂದೆ ಇಷ್ಟಮಿತ್ರನು ನೀನೆ
ಅಪ್ಪ ಬಂಧುಬಳಗ ಸರ್ವ ನೀನೆ
ಪೆಟ್ಟಿಗೆಯೊಳಗಿನ ಅಷ್ಟಾಭರಣ ನೀನೆ
ಶ್ರೇಷ್ಠಮೂರುತಿ ಕೃಷ್ಣ ನೀನಿರುವತನಕ ೧

ಒಡಹುಟ್ಟಿದವ ನೀನೆ ಒಡಲಿಗ್ಹಾಕುವ ನೀನೆ
ಉಡಲು ಹೊದೆಯಲು ವಸ್ತ್ರ ಕೊಡುವ ನೀನೆ
ಮಡದಿ ಮಕ್ಕಳನೆಲ್ಲ ಕಡೆ ಹಾಯಿಸುವ ನೀನೆ
ಬಿಡದೆ ಸಲಹುವ ಒಡೆಯ ನೀನಿರುವತನಕ ೨

ವಿದ್ಯೆ ಹೇಳುವ ನೀನೆ ಬುದ್ಧಿ ಕಲಿಸುವ ನೀನೆ
ಉದ್ಧಾರಕರ್ತ ಮಮ[1] ಸ್ವಾಮಿ ನೀನೆ
ಮುದ್ದು ಸಿರಿಪುರಂದರ ವಿಠಲ ನಿನ್ನಡಿಮೇಲೆ
ಬಿದ್ದುಕೊಂಡಿರುವ ಎನಗೇತರ ಭಯವೋ ೩

೫೩

ಅಂಬಿಗ ನಾ ನಿನ್ನ ನಂಬಿದೆ ಜಗ
ದಂಬಾರಮಣ ನಿನ್ನ ನಂಬಿದೆ ಪ.

ತುಂಬಿದ ಹರಿಗೋಲಂಬಿಗ-ಅದ
ಕೊಂಬತ್ತು ಛಿದ್ರ[2]ನೋಡಂಬಿಗ
ಸಂಭ್ರಮದಿಂದ ನೀನಂಬಿಗ-ಅದ
ರಿಂಬು ನೋಡಿ ನಡೆಸಂಬಿಗ ೧

ಹೊಳೆಯು ಭರವ ನೋಡಂಬಿಗ-ಅದಕೆ
ಸೆಳೆವು ಘನವಯ್ಯ ಅಂಬಿಗ
ಸುಳಿಯೊಳು ಮುಳುಗಿದೆ ಅಂಬಿಗ-ಎನ್ನ
ಸೆಳೆದುಕೊಂಡೊಯ್ಯೊ ನೀನಂಬಿಗ ೨

ಆರು ತೆರೆಯ[3] ನೋಡಂಬಿಗ-ಅದು
ಮೀರಿ ಬರುತಲಿದೆ ಅಂಬಿಗ
ಯಾರಿಂದಲಾಗದು ಅಂಬಿಗ-ಅದ ನಿ
ವಾರಿಸಿ ದಾಟಿಸೊ ಅಂಬಿಗ ೩

---

1 ನನ್ನ 2 ನವದ್ವಾರಗಳು 3 ಷಡ್ವೈರಿಗಳು

ಹತ್ತು ಬೆಂಬಡಿಗರು[1] ಅಂಬಿಗ–ಅಲ್ಲಿ
ಒತ್ತಿ ಬರುತಲಿಹರಂಬಿಗ
ಹತ್ತುವರೆತ್ತಲು ಅಂಬಿಗ–ಎನ್ನ
ಎತ್ತಿಕೊಂಡು ಒಯ್ಯೋ ಅಂಬಿಗ ೪

ಸತ್ಯವೆಂಬುದೆ ಹುಟ್ಟಂಬಿಗ–ಸದಾ
ಭಕ್ತಿಯೆಂಬುದೆ ಪಥವಂಬಿಗ
ನಿತ್ಯಮೂರುತಿ ಪುರಂದರವಿಠಲ–ನಮ್ಮ
ಮುಕ್ತಿ ಮಂಟಪಕೊಯ್ಯೊ ಅಂಬಿಗ ೫

೫೪

ಉಗಾಭೋಗಗಳು

ದಾಸನಾಗುವುದಕ್ಕೆ ಏಸು[2]ಜನ್ಮದ ಸುಕೃತ
ಭಾಸುರ ರವಿಕೋಟಿ ಶ್ರೀಶಗುಣವಂತ
ನಾಶರಹಿತ ನಿನ್ನ ದಾಸರ ದಾಸ್ಯವ
ಲೇಸಾಗಿ ಕೊಡು ಕಂಡ್ಯ ಪುರಂದರ ವಿಠಲ

* * *

ನಿನ್ನ ನಾಮ ಭಂಡಾರ ಕದ್ದ ಕಳ್ಳನು ನಾನು
ನಿನ್ನ ಭಕುತಿಯೆಂಬ ಸಂಕೋಲೆ[3]ಯನಿಕ್ಕಿ
ನಿನ್ನ ದಾಸರ ಕೈಯಲ್ಲಿ ಒಪ್ಪಿಸಿಕೊಟ್ಟು
ನಿನ್ನ ಮುದ್ರಿಕೆಯಿಂದ ಕಾಸಿ ಬಡಿಸು ದೇವ

---

1 ದಶೇಂದ್ರಿಯಗಳು (ಕೈ, ಕಾಲು, ಗುದ, ಉಪಸ್ಥ, ಬಾಯಿ, ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ) 2 ಎಷ್ಟು 3. ಸರಪಣಿ

ನಿನ್ನ ವೈಕುಂಠದುರ್ಗದೊಳು
ಎನ್ನ ಸೆರೆಯೊಳಿಟ್ಟು ಸಲಹೊ ಪುರಂದರವಿಠಲ

೫೫

ಒಡೆಯ ಒಂದಡಿ ಇಡೆ ಹಾವುಗೆ[1]ಯುವ ನಾನು
ಒಡೆಯ ಮೆಲ್ಲಡಿ ಇಡೆ ಛಡಿ ಬೆತ್ತದವ ನಾನು
ಒಡೆಯ ತಾಂಬೂಲವನುಗುಳುವೆಡೆಗಳಲ್ಲಿ
ಬಂಡಲೆ[2]ಯುವ ನಾನು ಕಾಳಂಚಿ[3]ಯುವ ನಾನು
ಒಡೆಯ ಒಡ್ಡೋಲಗದಿ ಒಪ್ಪುತಲಿರೆ ಕ
ನ್ನಡಿ ಛತ್ರ ಚಾಮರ ಪಿಡಿಯುವ ನಾನು
ಒಡೆಯ ಪುರಂದರವಿಠಲರಾಯನ
ಉಗುರು ಬಿದ್ದಲ್ಲಿ ಎನ್ನ ಶಿರವ ಕೊಡುವೆನು

('ಸುಳಾದಿ'ಯಿಂದ)

೫೬

ದಾಸದಾಸರ ಮನೆಯ ದಾಸಿಯರ ಮಗ ನಾನು
ಸಾಸಿರನಾಮದೊಡೆಯ ರಂಗಯ್ಯನ ಮನೆಯ ಪ.

---

1 ಪಾದುಕೆ 2 ಬಂಡಲೆ (?) 3 ಉಗುಳುವ ಪಾತ್ರೆ (ಪೀಕದಾನಿ)

ಶಂಕುದಾಸರ ಮನೆಯ ಮಂಕುದಾಸನು ನಾನು
ಮಂಕುದಾಸನು ನಾನು ಮರುಳುದಾಸ
ಸಂಕೀರ್ತನೆಯ ಮಾಡಿ ನೆನೆವ ಭಕ್ತರ ಮನೆಯ
ಬಿಂಕದಿ ಬಾಗಿಲ ಕಾಯ್ವ ಬಡದಾಸ ನಾನಯ್ಯ ೧

ಕಾಳಿದಾಸರ ಮನೆಯ ಕೀಳುದಾಸ ನಾನಯ್ಯ
ಆಳುದಾಸನು ನಾನು ಮೂಳದಾಸ
ಫಾಲಾಕ್ಷ ಸಖ ನಿನ್ನ ಭಜಿಪರ ಭಕ್ತರ ಮನೆಯ
ಆಳಿನಾಳಿನ ದಾಸ ಅಡಿದಾಸ ನಾನಯ್ಯ ೨

ಹಲವು ದಾಸರ ಮನೆಯ ಹೊಲೆದಾಸ ನಾನಯ್ಯ
ಕುಲವಿಲ್ಲದ ದಾಸ ಕುರುಬದಾಸ
ಛಲದಿ ನಿನ್ನ ಭಜಿಸುವರ ಮನೆಯ ಮಾದಿಗ ದಾಸ
ಸಲೆ ಮುಕ್ತಿ ಪಾಲಿಸೊ ಆದಿಕೇಶವರಾಯ ೩

೫೭

ಹೂವ ತರುವರ ಮನೆಗೆ ಹುಲ್ಲ ತರುವೆ . ಪ.

ಆವ ಪರಿಯಲಿ ಕಾಯೊ ದೇವ ಚಿನ್ಮಯನೆ , ಅ.ಪ.

ಈರೇಳು[1] ಜನುಮದಿಂ ದಾಸನಾಗಿಹೆ ನಾನು
ಸೇರಿದೆನು ತವ[2] ಶರಣರ ಸೇವೆಗೆ

---

1 ಹದಿನಾಲ್ಕು 2 ನಿನ್ನ

ಘೋರ ದುರಿತ[1]ಗಳೆಂಬ ವಾರಿಧಿಯ ಬತ್ತಿಸಿ
ನಾರಸಿಂಹನೆ ಕಾಯೊ ನಮ್ಮ ಕುಲಸ್ವಾಮಿ ೧

ರಂಗನಾಥನೆ ನಿನ್ನ ಡಿಂಗರಿಗ[2]ನೋ ನಾನು
ಡಂಗುರವ ಹೊಯಿಸಯ್ಯ ದಾಸನೆಂದು
ಭಂಗಪಡಿಸದೆ ನೀನು ಶರಣರೊಳಗಿಂಬಿಟ್ಟು
ಗಂಗೆ ಜನಕನೆ ಕಾಯೋ ಚರಣಕ್ಕೆ ಶರಣು ೨

ಎಷ್ಟು ಮಾಡಲು ನಿನ್ನ ಬಂಟನೋ ವೈಷ್ಣವರ
ಹುಟ್ಟು ದಾಸಿಯ ಮಗನೊ ಪರದೇಸಿಯೊ
ಸೃಷ್ಟಿಗೊಡೆಯನೆ ನೆಲೆಯಾದಿಕೇಶವನೆ ಕೈ
ಬಿಟ್ಟೆಯಾದರೆ ನಿನಗೆ ಹರಿದಾಸರಾಣೆ ೩

೫೮

ಬಂಟನಾಗಿ ಬಾಗಿಲು ಕಾಯ್ವೆ, ಹರಿಯ ವೈ
ಕುಂಠದ ಸೊಂಪಿನ ದಾಸರ ಮನೆಯ ಪ.

ಹೊರಸುತ್ತು ಪ್ರಾಕಾರವ ಸುತ್ತಿ ಬರುವೆ
ಬರುವ ಹೋಗುವವರ ವಿಚಾರಿಸಿ ಬಿಡುವೆ
ಕರದಿ ಕಂಬಿ[3]ಯ ಹೊತ್ತು ಅಲ್ಲಿ ನಿಂದಿರುವೆ
ಹರಿಯ ಸಮ್ಮುಖದ ಓಲಗದೊಳು ಇರುವೆ ೧

---

1 ಪಾಪ 2 ಸೇವಕ 3 ಕೋಲು

ತೊತ್ತು ತೊಂಡ[1]ನಾಗಿ ಬಾಗಿಲ ಕಾಯ್ವೆ
ಚಿತ್ರದ ಚಾವಡಿ[2] ರಜ[3]ವನು ಬಳಿವೆ
ಮುತ್ತಿನ ರಂಗವಲ್ಲಿಯನಿಟ್ಟು ಬರೆವೆ
ರತ್ನಗಂಬಳಿಯ ಪೊತ್ತು ಹಾಸುವೆನು ೨

ವೇಳೆ ವೇಳೆಗೆ ನಾ ಊಳಿಗ ಮಾಡುವೆ
ಆಲವಟ್ಟಿಗೆ[4] ಚಾಮರವ ಬೀಸುವೆ
ತಾಳದಂಡಿಗೆ ಭೃಂಗಿ ಮೇಳಗಳ ಕೂಡಿ
ಶ್ರೀಲೋಲನ ಕೊಂಡಾಡಿ ಪಾಡುವೆನು ೩

ಎಂಜಲ ಹರಿವಾಣ[5]ಗಳ ಬೆಳಗುವೆ
ಕಂಜನಾಭನ ಪಾದಕಮಲವ ತೊಳೆವೆ
ರಂಜಿಪ ಕುಸುಮದ ಮಾಲೆ ತಂದಿಡುವೆ
ಸಂಜೆಗೆ ಪಂಜಿನ ದಾಸನಾಗಿರುವೆ ೪

ವಿಾಸಲೂಳಿಗವ ನಾ ಮಾಡಿಕೊಂಡಿರುವೆ
ಶೇಷ[6]ಪ್ರಸಾದವ ಉಂಡುಕೊಂಡಿರುವೆ
ಶೇಷಗಿರಿ ಕಾಗಿನೆಲೆಯಾದಿಕೇಶವನ
ದಾಸರ ದಾಸರ ದಾಸರ ಮನೆಯ ೫

---

1 ಸೇವಕ 2 ಮಂಟಪ 3 ಧೂಳು 4 ಬೀಸಣಿಗೆ 5 ತಟ್ಟೆ 6 ಉಳಿದ

೫೯

ಒಡೆಯ ನೀನಹುದೋ ಎನ್ನ ಬಡವನಾಧಾರಿ ನೀನು ಧ್ರುವ

ಪೊಡವಿಯೊಳಗೆ ಎನ್ನ ಬಿಡದೆ ಸಲಹುತಿಹ್ಯ
ಅಡಿಗಡಿಗೆ ತಂದು ನೀ ಪಡಿ[1]ಯ ನಡೆಸುವ ಸ್ವಾಮಿ ೧

ಪಿಡಿದು ಎನ್ನ ನೀ ಕೈಯ ಕಡೆಗಾಣಿಸುವಿ ಪೂರ್ಣ
ಬಿಡಿಸಿ ಧಾವತಿ[2]ಯಿಂದ ಕೊಡುವಿ ತಂದು ನಿಧಾನ ೨

ಕೊಂಡಾಡಲಳವೆ ನಿನ್ನ ಮಂಡಲದೊಳು ಕೀರ್ತಿ
ಪಿಂಡ[3] ಬ್ರಹ್ಮಾಂಡ[4] ಪರಿಪೂರ್ಣವಾಗಿಹ ದೇವ ೩

ಕೊಳದೆ ಸೇವೆಯ ನಿನ್ನ ಅಳಿದು ನಡೆಸುವ ಪಡೆಯ
ಪಾಲಕನಹುದೊ ಎನ್ನ ಮೂಲೋಕದೊಡೆಯನೆ ೪

ನಿತ್ಯ ನಿಜವಾಗ್ಯಾಗ ಹೊತ್ತು ನಡೆಸುವ ಪಡೆಯ
ಭೃತ್ಯರ ನಿಜಭೃತ್ಯ ನಿಜ ದಾಸಮಹಿಪತಿಗಿನ್ನು ೫

೬೦

ದಾಸ ದಾಸ ದಾಸರ ದಾಸ್ಯವ ಕೊಡೋ-ದೋಷರಾಶಿಯಳಿದು ಪ.

ಶ್ರೀಶ ಧೀಶ[5] ಸರ್ವೇಶ ಸುರೇಶ್ವರ-ಭಾಸುರ[6] ಗುಣಗಣಭವ್ಯ ಶರೀರ ಅ.ಪ.

ಚಿತ್ತ ನಿನ್ನ ಪದಸೇವೆಯೊಳಿರಲಿ - ಚಿಂತೆ ಇತರ ಬಿಡಲಿ
ಅಂತರಂಗದಲ್ಲಾನಂದಿಸಲಿ - ಅಹಂಕೃತಿಯನು ಬಿಡಲಿ
ಸಂತತ ನಿನ್ನ ಪದಪಂಕಜ ಭಕ್ತರ - ಪಂಥ[7]ವ ಪಾಲಿಸೊ
ಪರಮಪುರುಷ ಹರಿ ೧

---

1 ಆಹಾರ 2 ತೊಂದರೆ, ಬವಣೆ. 3 ಶರೀರ 4 ಪ್ರಪಂಚ
5 ಬುದ್ಧಿಗೊಡೆಯ 6 ಪ್ರಕಾಶಿಸು 7 ಪ್ರತಿಜ್ಞೆ

ಅರಿಷಡ್ವರ್ಗಗಳಟವಿಯು ಖಂಡಿಸು ಆನಂದದಲಿರಿಸು
ದುರುಳರ ಸಂಗವ ದೂರ ಮಾಡಿಸು - ದುರ್ಮತಿಯನೆ ಬಿಡಿಸು
ಸರಸ ಸಂಭ್ರಮಸನ್ನುತ ಭಕುತರೊಳ್ - ನಿರುತ[1]ವು
ನಿಲ್ಲಿಸೊ ನೀರಜಾಕ್ಷ ಹರಿ ೨

ಶ್ರೀ ಜಗನ್ಮೋಹನಾಕಾರ ತ್ರಿಗುಣಾ[2]ತೀತ ತೀರ್ಥಪಾದ[3]
ಭಜಕರ ಪಾವನ ಭವಸುತ ಚರಣ - ಋಜುಗುಣ[4]ನುತಾಭರಣ
ವಿಜಯವಿಠಲಾಧೀಶ್ವರ ವಿಶ್ವೇಶ್ವರ ಕುಜನ ವಿದಾರಣ[5]
ಕೋವಿದ[6]ನುತ ಹರಿ ೩

೬೧

ಭಕುತಿಯ ಪಾಲಿಸು ಜೀಯ - ಮುಂದೆ
ಮುಕುತಿಗೊಡುವೆ ಯಾಕೆ ನೀನೊಲಿದ ಮೇಲೆ ಪ.

ತನುವೆ ನಿನ್ನಾಧೀನವೆನಿಸು - ಇದು
ಅನುದಿನ ಕೊಡು ಏಕಪ್ರಕಾರ ಮನಸು
ಧನ ಒಡವೆಯು ಕಂಡ ಕನಸು - ಎಂದು
ಎನಗೆ ತೋರಲಿ ನಿತ್ಯ ನಿನ್ನಂಘ್ರಿ ನೆನಸು ೧

ತತ್ವದ ಮತ[7]ದೊಳಗಿರಿಸು - ಪುಸಿ
ಉತ್ತರ ಮತವೆಂಬ ಮಾರ್ಗವ ಮರೆಸು
ಉತ್ತಮರೊಳಗೆನ್ನನಿರಿಸು - ಭವ
ಒತ್ತುವ ನಿನ್ನ ನಾಮಾಮೃತ ಸುರಿಸು ೨

1 ಸದಾ 2 ಸಾತ್ವಿಕ, ರಾಜಸ, ತಾಮಸ ಗುಣಗಳು 3 ವಿಷ್ಣು (ಪಾದದಿಂದ ಗಂಗೆ ಉದ್ಭವಿಸಿದ್ದು) 4 ನೇರವಾದ ಗುಣ 5 ದುಷ್ಟಸಂಹಾರಿ 6 ವಿದ್ವಾಂಸ 7 ಮಧ್ವಮತ

ಶ್ರವಣ ಮನನ ಧ್ಯಾನವೀಯೋ - ಎನ್ನ
ಅವಗುಣ[1]ವೆಣಿಸದೆ ಕರುಣಾಳು ಕಾಯೊ
ಅವಸಾನ[2]ದಲಿ ನೀನೆ ಗತಿಯೊ - ತ್ರೈ
ಭುವನೇಶ ವಿಜಯವಿಠಲ ನೀ ದೊರೆಯೊ ೩

೭೨

ಬಂಟನಿಂದ ವೇಳೆ ವೇಳೆಗೆ ಊಳಿಗವ ಕೊಂಡು
ಉಂಟುಮಾಡು ನಿನ್ನ ದಯವ ಪ.

ನಂಟನಾಗಿ ನೀ ಎನ್ನ ಅವಸರ[3]ಕೊದಗು ವೈ
ಕುಂಠಪತಿ ವೆಂಕಟೇಶ ಶ್ರೀಶ ಅ.ಪ.

ನೀನಟ್ಟಿದಲ್ಲಿಗೆ ಕರೆದರೋಡಿ ಬಹೆ
ನೀನುಂಡುಳಿದುದನುಣುವೆ
ನೀನಾರಾಧೀನ ಮಾಳ್ಪೆ ಅವರಾಜ್ಞೆಯಲಿ ನಡೆವೆ
ನೀನುಟ್ಟ ಮೈಲಿಗುಡುವೆ ತೊಡುವೆ ೧

ಕ್ರೂರ ಕಂಟಕ ಕುಲವ ನಿನ್ನ ನಾಮಾಸ್ತ್ರ[4]ದಿ ವಿ
ದಾರಿಸು[5]ವೆ ಹುಯ್ಯಲಿಡುವೆ
ಆರಿಗಂಜೆನು ಯಮನ ಚಾಕರಿಗಂಜೆ ನಾ
ಮಾರುವ ತವಾಂಘ್ರಿಗುರುವ ಶಿರವ ೨

---


1 ದುರ್ಗುಣ 2 ಕಡೆಗಾಲ 3 ಸಮಯ 4 ಹೆಸರೆನ್ನುವ ಬಾಣ 5 ಖಂಡಿಸು

ಇಂತೆ ಸೇವೆಯ ಕೊಂಡು ಎನ್ನ ತನುಮನದಲ್ಲಿ
ಸಂತತವಸರಕೊದಗಯ್ಯ
[ಚಿಂತೆಸೆಯದ ತೆರದಿ] ಅಂತ್ಯಯಾತ್ರೆಯವಸರಕೊದಗು
ಕಾಂತ ಪ್ರಸನ್ನ ವೆಂಕಟಪ್ಪ ಎನ್ನಪ್ಪ ೩

೬೩

ಬರುವುದೆಲ್ಲ ಬರಲಿ ಸಿರಿಹರಿಯ ಕರುಣವಿರಲಿ ಪ.

ಗುರುಗಳ ಚರಣಸರೋರುಹ ಮಧುರಸ ತರ
ತರ ತಪದಿ ಪೈಮರೆತಿರಲಿ ಅ.ಪ.

ಸತಿಯು ಮತಿಯು ಕೆಡಲಿ ಸುತರತಿಪತಿತರಾಗಿರಲಿ
ಜೊತೆಯೊಳಿದ್ದ ಹಿತ ಪ್ರತಿಕೂಲನಾಗಲಿ
ವತನ[1] ಕೆಡುವ ಪ್ರಯತ್ನವು ಬರಲಿ ೧

ಅರಸು ಕರೆಸದಿರಲಿ ಸತಿ ಸರಸ ಸಂತಸದಿರಲಿ
ನರಸಖನಿಗೆ ಭಾರ ಸಮರ್ಪಿಸಲಿ
ವಿರಸಮಾಡಿ ಮನೆಮುರಿಸಂತ ಬರಲಿ ೨

ಮಾನ[2]ಮಾಡದಿರಲಿ ಜನರಪಮಾನಮಾಡಿ ನಗಲಿ
ಜ್ಞಾನಹೀನನೆಂದೆನುತ ನಿಂದಿಸಲಿ .
ಶ್ರೀನಿಧಿ ಗೋಪಾಲವಿಠಲನು ಬೆರೆಲಿ ೩

---

1 ಆಸ್ತಿ 2 ಗೌರವ, ಮರ್ಯಾದೆ.

ಯಾತಕೆನ್ನನು ಬರಿದೆ ದುಃಖಿತನ ಮಾಡುವಿ ಧ
ರಾತಳದೊಳನುದಿನ ವಿಧಾತ[1]ಪಿತನೆ
ಭೀತಿಗೊಂಬುವನಲ್ಲ ಭಯನಿವಾರಣ ಜಗ
ನ್ನಾಥ ವಿಠಲನೆ ದಯಮಾಡು ಜಗದೀಶ ೩

೬೬

ಎನ್ನಾಗಮ[2]ವು ಹೀಗಾಯಿತೋ ದೇವ
ಇನ್ನು ನೀ ಎನ್ನನು ಸಲಹುವ ಬಗೆಯೆಂತೊ ಪ.

ಸಕ್ಕರೆ ತಾಯೆಂದು ಸಂತೆಗೆ ಕಳುಹಲು
ತಕ್ಕಡಿ ಲಶುನ[3]ವ ತಂದ ತೆರಳನಂತೆ ೧

ಪರಮ ನಿರ್ಮಲವಾದ ತುಲಸಿ ತಾಯೆನ್ನೆ ದುಷ್ಟ
ತುರುಚಿಯನೆ ತಂದ ತೆರಳನಂತೆ ೨

ಮುಸಿಯ ಒರೆಸಿಕೊಂಡು ಬಾಯೆನ್ನೆ ಶಿಶು ತಾನೆ
ಕೆಸರು ಪೂಸಿಕೊಂಡು ಬಂದ ತೆರಳನಂತೆ ೩

ಕಳುಹಿದ ಹಿರಿಯರು ಹಳಿ[4]ಯಲಿ ಚಿಂತಿಲ್ಲ
ಗೆಳೆಯರು ನಗುವ ಚಿಂತೆಯೆ ಘನವೆಲೊ ದೇವ ೪

ಆಪುತ ಪ್ರಿಯ ಬಂಧು ವ್ಯಾಪಕ ನೀನೆಂದು
ಜ್ಞಾಪಕಗೊಳಿಸಿದೆ ವಾಸುದೇವ ವಿಠಲ ೫

೬೭

ಕಡೆಗಣ್ಣಿನಲಿ ನೀ ನೋಡದಿರೆನ್ನಯ್ಯ
ಬಿಡಬೇಡವೋ ಕೈಯ
ಬಡವರ ಬಂಧು ಬಹು ಕೃಪೆಸಿಂಧು
ಒಡೆಯ ನೀನಲ್ಲದೆ ನಮಗೆ ಬ್ಯಾರಿಲ್ಲವೋ ಪ.

---

1 ಬ್ರಹ್ಮ 2 ವಿಧಾನ 3 ಬೆಳ್ಳುಳ್ಳಿ 4 ತೆಗಳುವಿಕೆ

ಶತ ಅಪರಾಧವ ಮಾಡಿದೆನಯ್ಯ
ಸೇರಿದೆ ನಾ ನಿನ್ನ ಬೆನ್ನ
ಅತಿ ಪಾತಕಿ ಅಜಾಮಿಳನ ಉದ್ಧರಿಸಿದೆ
ಪೃಥಿವಿಯೊಳಗೆ ಬಿರುದಾಂತ ಶ್ರೀಕಾಂತ ೧

ನೆಲೆಗಾಣದೆ ನಾನಾ ಪರಿ ಚಿಂತಿಸಿ
ಒಳಗಾದೆನೋ ಹೀಗೆ
ಬಳಲಿಸಬ್ಯಾಡವೋ ಭಕ್ತರ ಕುಟುಂಬಿ
ನಳಿನದಳಾಂಬಕ[1] ನೀ ಸಲಹೆನ್ನನು ೨

ಸಾರಿ ಹೇಳುವೆ ಎನ್ನಯ ಬಳಗದ
ಆರಭಾರ[2] ನಿನ್ನದು
ಹೇರೊ[3]ಪ್ಪಿಸಿದ ವ್ಯಾಲ್ಯಾತರ ಸುಂಕವು
ಕಾರುಣ್ಯನಿಧಿ ಹೆಳವನ ಕಟ್ಟೆ ರಂಗಯ್ಯ ೩

---

1 ವಿಷ್ಣು. 2 ಆಡಳಿತ, ಮೇಲ್ವಿಚಾರಣೆ. 3 ಸಾಮಾನಿನ ಹೊರೆ.

## ಸಖ್ಯಭಾವ

### ೬೮

ಮರೆತೆಯೇನೋ ರಂಗ ಮಂಗಳಾಂಗ
ತುರುಕರು ಕಾಯ್ವಲ್ಲಿ ತೋಡನಾಗಿದ್ದೆನ್ನ ಪ.

ಕೋಲು ಕೈಯಲಿ ಕೊಳಲು, ಜೋಲುಗಂಬಳಿ ಹೆಗಲ
ವ್ಯಾಲೆ ಕಲ್ಲಿ[1] ಚೀಲ ಕೊಂಕಳಲ್ಲಿ
ಕಾಲಗಡಗವನಿಟ್ಟು ಕಾಡೊಳಿಹ ಪಶುಹಿಂಡ
ಲಾಲಿಸುವ ಬಾಲಕರ ಮ್ಯಾಳ[2]ದೊಳಗಿದ್ದೆನ್ನ ೧

ಕಲ್ಲು ಮಣಿ ಕವಡೆಯನು ಕಾಡೊಳಿಹ ಗುಲಗಂಜಿ
ಸಲ್ಲದೊಡವೆಯ ನೀನು ಸರ್ವಾಂಗಕೆ
ಅಲ್ಲಲ್ಲೆಸೆಯೆ ಧರಿಸಿ ನವಿಲುಗರಿಗಳ ಗೊಂಡೆ[3]
ಅಲ್ಲಿ ಗೊಲ್ಲರ ಕೂಡ ಚೆಲ್ಲಾಟ ಮಾಡುತಲಿ ೨

ಸಿರಿದೇವಿ ಬಂದು ಸೇರಿದ ಬಳಿಕ ಲೋಕದಲಿ
ಸಿರಿ ಅರಸನೆಂದು ಸೇವಕರರಿವರೋ
ಶರಣಾಗತರ ಪೊರೆವ ಶ್ರೀರಂಗವಿಠಲಯ್ಯ
ನರಸಿಂಗ ನೀನಿರುವ ಪರಿಯು ಮುಂದಿನ ಸಿರಿಯು ೩

---

1 ಬಲೆಯ ಚೀಲ 2 ಸಮೂಹ 3 ಗುಚ್ಛ

೭೯

ಏನ ಬೇಡಲೊ ನಿನ್ನ ದೇವಾದಿದೇವ ಪ.
ಏನಹುದೊ ನಿನ್ನೊಳಗೆ ಮಹಾನುಭಾವ ಅ.ಪ.

ಮನೆಯ ಬೇಡಲೆ ವನಧಿ[1] ಹಾಸಿಗೆಯು ವಟಪತ್ರ[2]
ವನಿತೆಯರ ಬೇಡಲೆ ಬ್ರಹ್ಮಚಾರಿ
ಘನ ಸೌಖ್ಯವನು ಬಯಸಿ ನೆನೆಯುವರ ಮನದಲಿಹೆ
ತಿನುವುದಕೆ ಕೇಳುವೆನೆ ನವನೀತ[3] ಚೋರ ೧

ಒಡವೆಗಳ ಬಯಸೆ ಶಿಖಿ ಪಿಂಛ[4] ತುಳಸಿ ಪತ್ರ
ಕಡು ಸೈನ್ಯವನೆ ಬಯಸೆ ಗೋಪಾಲನು
ಬಿಡದೆ ರೂಪವ ಬಯಸೆ ನೀಲಮೇಘ[5]ಶ್ಯಾಮ
ಉಡುವುದಕೆ ಕೇಳುವೆನೆ ಸ್ತ್ರೀವಸನ ಚೋರ ೨

ಶಕ್ತಿಯನು ಗೋಪಿಕಾಸ್ತ್ರೀಯರಲಿ ವ್ಯಯ[6]ಗೈದೆ
ಭಕ್ತಿಯನು ಸತ್ಯವಂತರಿಗಿತ್ತಿಹೆ
ಭಕ್ತರನು ವಂಚಿಸುತ ನೀನು ಬಚ್ಚಿಟ್ಟಿರುವ
ಮುಕ್ತಿ ಕಾಂತೆಯ ಕೊಡು ಸುಖಿಪೆನೊ ಶ್ರೀಕೃಷ್ಣ ೩

೭೦

ಹ್ಯಾಂಗೆ ಕೊಟ್ಟನು ಹೆಣ್ಣ ಸಾಗರನು ಈ ವರಗೆ ಪ.
ಶೃಂಗಾರ ಪುರುಷರು ಬಹುಮಂದಿಯಿರಲು ಅ.ಪ.

1 ಸಮುದ್ರ 2 ಆಲದೆಲೆ 3 ಬೆಣ್ಣೆ 4 ನವಿಲುಗರಿ 5 ಕಪ್ಪುಮೋಡ
6 ವ್ಯರ್ಥ

ಗುಮ್ಮ ನಾರುವ[1] ಮೆಯ್ಯಿ ಬಿಟ್ಟಿದ್ದ ಬಿರುಗಣ್ಣು[2]
ಮುಟ್ಟಿ ನೋಡಿದರೆ ಮೈಯ್ಯತಿ ಕಠಿಣವು
ಸಟ್ಟ ಮೋರೆಯು ಇವಗೆ ಎಷ್ಟಿದ್ದ ಹಲ್ಲುಗಳು
ಇಷ್ಟು ಘೋರಮುಖದಳಿಯನೆಲ್ಲಿ ದೊರಕಿದನೊ ೧

ಬಡವನು ಭಿಕ್ಷುಕನು ಬಡಬ[3]ನಂದದಿ ಕೋಪವು
ನೋಡಿದರೆ ತಲೆ ಜಟೆಯು ಕಟ್ಟಿಹುದು
ಬೆಡಗು ನುಡಿಗಾರ ಜಾರ ಚೋರನಿಗೆ
ನೋಡಿ ನೋಡಿ ಹೆಣ್ಣು ಹ್ಯಾಂಗೆ ಕೊಟ್ಟನು ೨

ಭಂಡ[4]ನಾಗಿರುವನು ಕಂಡವರೊಡನೆ ಕಾಳಗವ
ಕೊಂಡು ಬಹ ಬಲು ಉದ್ದಂಡ[5]ನಿವನು
ಅಂಡಜ[6]ವಾಹನಗೆ ಯೋಗ್ಯವಾದ ಹೆಣ್ಣ
ಕಂಡುಕಂಡೀ ಹಯವದನಗೆ ಕೊಟ್ಟನ್ಹ್ಯಾಂಗೆ ೩

೭೧

ಎನಗೂ ಆಣೆ ರಂಗ ನಿನಗೂ ಆಣೆ ಪ.
ಎನಗೂ ನಿನಗೂ ಇಬ್ಬರಿಗೂ ಭಕ್ತರಾಣೆ ಅ.ಪ.

ನಿನ್ನ ಬಿಟ್ಟು ಅನ್ಯರ ಭಜಿಸಿದರೆನಗೆ ಆಣೆ, ರಂಗ
ಎನ್ನ ನೀ ಕೈಬಿಟ್ಟು ಹೋದರೆ ನಿನಗೆ ಆಣೆ ೧

ತನುಮನ ಧನದಲಿ ವಂಚಕನಾದರೆ ಎನಗೆ ಆಣೆ, ರಂಗ
ಮನಸು ನಿನ್ನಲಿ ನಿಲಿಸದಿದ್ದರೆ ನಿನಗೆ ಆಣೆ ೨

---

1 ದುರ್ವಾಸನೆ 2 ತೆರೆದ ಕಣ್ಣು 3 ಬಡಬ = ನೀರಿನಲ್ಲಿ ಅಡಗಿರುವ ಬೆಂಕಿ
4 ಪುಂಡ 5 ಗರ್ವಿ 6 ಪಕ್ಷಿ (ಗರುಡ)

ಕಾಕುಮನುಜ[1]ರ ಸಂಗವ ಮಾಡಿದರೆನಗೆ ಆಣೆ, ರಂಗ
ಲೌಕಿಕವ ಬಿಡಿಸದಿದ್ದರೆ ನಿನಗೆ ಆಣೆ ೩

ಶಿಷ್ಟರ ಸಂಗವ ಮಾಡದಿದ್ದರೆ ಎನಗೆ ಆಣೆ, ರಂಗ
ದುಷ್ಟರ ಸಂಗವ ಬಿಡಿಸದಿದ್ದರೆ ನಿನಗೆ ಆಣೆ ೪

ಹರಿ ನಿನ್ನಾಶ್ರಯ ಮಾಡದಿದ್ದರೆ ಎನಗೆ ಆಣೆ, ರಂಗ
ಪುರಂದರ ವಿಠಲ ನೀನೊಲಿಯದಿದ್ದರೆ ನಿನಗೆ ಆಣೆ ೫

೭೨

ಆರು ಬದುಕಿದರಯ್ಯ ಹರಿ ನಿನ್ನ ನಂಬಿ ಪ.

ತೋರು ಈ ಜಗದೊಳಗೆ ಒಬ್ಬರನು ಕಾಣೆ ಅ.ಪ.

ಕರಪತ್ರ[2]ದಿಂದ ತಾಮ್ರಧ್ವಜನ ತಂದೆಯ
ಕೊರಳ ಕೊಯಿಸಿದೆ ನೀನು ಕುಂದಿಲ್ಲದೆ
ಮರುಳನಂದದಿ ಪೋಗಿ ಭೃಗುಮುನಿಯ ಕಣ್ಗೊಡೆದೆ
ಅರಿತು ತ್ರಿಪುರಾಸುರನ ಹೆಂಡಿರನು ಬೆರೆದೆ ೧

ಕಲಹ ಬಾರದ ಹಾಗೆ ಕರ್ಣನನು ನೀ ಕೊಂದೆ
ಸುಲಭದಲಿ ಕೌರವರ ಮನೆಯ ಮುರಿದೆ
ನೆಲನ ಬೇಡುತ ಪೋಗಿ ಬಲಿಯ ತನುವನು ತುಳಿದೆ
ಮೊಲೆಯನುಣಿಸಲು ಬಂದ ಪೂತನಿಯ ಕೊಂದೆ ೨

ತಿರಿದುಂಬ ದಾಸರ ಕೈಲಿ ಕಪ್ಪವ ಕೊಂಬೆ
ಗರುಡವಾಹನ ನಿನ್ನ ಚರಿಯ[3]ವರಿಯೆ
ದೊರೆ ಪುರಂದರ ವಿಠಲ ನಿನ್ನನ್ನು ನಂಬಿದರೆ
ತಿರುಪೆಯೂ ಹುಟ್ಟಲೊಲ್ಲದು ಕೇಳೊ ಹರಿಯೆ ೩

---

1 ಕೆಟ್ಟಮನುಷ್ಯ 2 ಗರಗಸ 3 ನಡತೆ

೭೩

ಏತರ ಚೆಲುವ ರಂಗಯ್ಯ ಪ.

ಹರಿಯೆಂಬ ಮಾತಿಗೆ ಮರುಳಾದೆನಲ್ಲದೆ ಅ.ಪ.

ದೇಶಕೋಶಗಳುಳ್ಳೊಡೆ ತಾ ಕ್ಷೀರವಾ
ರಾಶಿ[1]ಯೊಳಗೆ ಮನೆ ಕಟ್ಟುವನೆ
ಹಾಸುವುದಕೆ ಹಾಸಿಗೆಯುಳ್ಳೊಡೆ ತಾ
ಶೇಷನ[2] ಬೆನ್ನಿಲಿ ಮಲಗುವನೆ ರಂಗ ೧

ಬುದ್ಧಿಯ ಪೇಳುವ ಪಿತನುಳ್ಳೊಡೆ ಬೆಣ್ಣೆ
ಕದ್ದು ಚೋರನೆಂದೆನಿಸುವನೆ
ಬದ್ಧವಾಹನ ತನಗಿದ್ದರೆ ಹಾರುವ
ಹದ್ದಿನ ಮೇಲೇರಿ ತಿರುಗುವನೆ ರಂಗ

ಹಡೆದ ತಾಯಿ ತನಗುಳ್ಳೊಡೆ ಗೋಪರ
ಒಡಗೂಡಿ ತುರು ಹಿಂಡ ಕಾಯುವನೆ
ಮಡದಿಯು ಉಳ್ಳೊಡೆ ಅಡವಿಯೊಳಾಡುವ
ಹುಡುಗಿಯರ ಸಂಗ ಮಾಡುವನೇ ರಂಗ ೩

ಸಂಗಡ ಉದಿಸಿದ ಅಣ್ಣನಿದ್ದರೆ ನರ
ಸಿಂಗರೂಪವ ಧರಿಸುವನೆ
ಅಂಗದ ಮೇಲಿನ ಆಸೆಯಿದ್ದೊಡೆ ಕಾ
ಳಿಂಗನ ಮಡುವಿಲಿ ಧುಮುಕುವನೆ ರಂಗ ೪

---

1 ಕ್ಷೀರಸಮುದ್ರ, ಹಾಲಿನ ಕಡಲು. 2 ಆದಿಶೇಷನೆಂಬ ಹಾವು

ಸತಿಯುಳ್ಳೊಡೆ ರಾಕ್ಷಃಪತಿ[1]ಯೆಡೆಗೈದಿ ತಾ
ಕ್ಷಿತಿ[2]ಯ ದಾನವನು ಬೇಡುವನೆ
ಮತಿವಂತ ಪುರಂದರವಿಠಲರಾಯನ
ಪತಿತ ಪಾವನನೆಂದು ತುತಿಸಿ[3]ದೆನಲ್ಲದೆ

೭೪

ಉಗಾಭೋಗಗಳು

ನಿನ್ನಂಥ ಸ್ವಾಮಿ ಎನಗುಂಟು ನಿನಗಿಲ್ಲ
ನಿನ್ನಂಥ ತಂದೆ ಎನಗುಂಟು ನಿನಗಿಲ್ಲ
ನಿನ್ನಂಥ ದೊರೆ ಎನಗುಂಟು ನಿನಗಿಲ್ಲ
ನೀನೆ ಪರದೇಶಿ ನಾನೆ ಸ್ವದೇಶಿ
ನಿನ್ನರಸಿ ಲಕುಮಿ ಎನ್ನ ತಾಯಿ
ನಿನ್ನ ತಾಯ ತೋರೋ ಪುರಂದರವಿಠಲ

* * *

ತಾಯಿ ಗೋಪಿಯಂತೆ ಒರಳನೆಳೆಸಲಿಲ್ಲ
ವಾಲಿಯಂತೆ ಎದುರುವಾದಿಸಲಿಲ್ಲ
ಭೃಗುಮುನಿಯಂತೆ ನಿನ್ನ ಎದೆಯನೊದೆಯಲಿಲ್ಲ
ಭೀಷ್ಮನಂತೆ ನಿನ್ನ ಹಣೆಯನೊಡೆಯಲಿಲ್ಲ
ಕೊಂಕಣೇರೆಮ್ಮೆಗೆ ಕೊಡತಿ ಮದ್ದ[4]ಬಂತೆ
ಅವರೆ ಮುದ್ದು ನಿನಗೆ ಪುರಂದರ ವಿಠಲ

---

1 ಬಲಿ 2 ಭೂಮಿ 3 ಕೊಂಡಾಡು 4 ಔಷಧಿ

೭೫

ನಿನ್ನ ನಾನೇನೆಂದೆನೋ ರಂಗಯ್ಯ ರಂಗ
ನಿನ್ನ ನಾನೇನೆಂದೆನೋ ಪ.

ನಿನ್ನ ನಾನೇನೆಂದೆ ನಿಗಮ[1]ಗೋಚರ ಸ್ವಾಮಿ
ಪನ್ನಂಗಶಯನ[2] ಪಾಲ್ಗಡಲೊಡೆಯನೆ ರಂಗ ಅ.ಪ.

ಧೀರಸೋಮಕ ವೇದಚೋರ ಖಳನ ಸೀಳಿ
ವಾರಿಧಿಗಿಳಿದು ಪರ್ವತವನೆತ್ತಿ
ಧಾರುಣಿಯನು ಕದ್ದ ದನುಜದಲ್ಲಣ[3]ನಾದ
ನಾರಸಿಂಹ ನಮೋನಮೋ ಎಂದೆನಲ್ಲದೆ
ನೀರಪೊಕ್ಕವನೆಂದೆನೆ–ಬೆನ್ನಿನ ಮೇಲೆ
ಭಾರ ಪೊತ್ತವನೆಂದೆನೆ–ಮಣ್ಣನು ಅಗೆದು
ಬೇರ ಮೆದ್ದವನೆಂದೆನೆ–ರಕ್ಕಸನೊಳು
ಹೋರಿ ಹೊಯ್ದನೆಂದು ಹೊಗಳಿದೆನಲ್ಲದೆ ೧

ಧರೆಯ ದಾನವ ಬೇಡಿ ಧರಣಿ ಈರಡಿ[4] ಮಾಡಿ
ಪರಶು[5]ವ ಪಿಡಿದು ಕ್ಷತ್ರಿಯರ ಕಾಡಿ
ಚರಣದಿ ಪಾಷಾಣ[6] ಪೆಣ್ಣ ಮಾಡಿದ ಪುಣ್ಯ
ಚರಿತ್ರ ಯಾದವಪತಿ ಶರಣೆಂದೆನಲ್ಲದೆ
ತಿರುಕ ಹಾರುವ[7]ನೆಂದೆನೆ–ಹೆತ್ತ ತಾಯ
ಕೊರಳ ಕೊಯ್ದವನೆಂದೆನೆ–ವನವಾಸದಿ
ಧುರಕೆ[8] ನೆರೆದವನೆಂದೆನೆ–ಪೂತನಿಯನು
ಸರಕು ಮಾಡದೆ ಕೊಂದ ಹರಿಯೆಂದೆನಲ್ಲದೆ ೨

ಚಿತ್ತಜ[9]ಕೋಟಿ ಲಾವಣ್ಯದಿ ಬಂದು
ಉತ್ತಮ ಸ್ತ್ರೀಯರ ವ್ರತವಳಿದು

---

1 ವೇದ 2 ಶೇಷಶಾಯಿ 3 ರಾಕ್ಷಸರಿಗೆ ಭಯವುಂಟುಮಾಡುವ 4 ಎರಡು ಹೆಜ್ಜೆ 5 ಕೊಡಲಿ 6 ಕಲ್ಲು 7 ಬ್ರಾಹ್ಮಣ 8 ಯುದ್ಧ 9 ಮನ್ಮಥ

ಮತ್ತೆ ಕಲ್ಕಿಯಾಗಿ ಮಲೆತರ ಮಡುಹಿದ
ಹತ್ತವತಾರದ ಹರಿಯೆಂದೆನಲ್ಲದೆ

ಒತ್ತಲಿದ್ದವನೆಂದೆನೆ – ತೇಜಿ[1]ಯನೇರಿ
ಒತ್ತಿ ಆಳ್ದವನೆಂದೆನೆ – ಬಾರಿ ಬಾರಿಗು
ಮತ್ತೆ ಪುಟ್ಟಿದನೆಂದೆನೆ – ಆದಿಕೇಶವ
ಭಕ್ತವತ್ಸಲನೆಂದು ಪೊಗಳಿದೆನಲ್ಲದೆ ೩

೭೬

ನಿನಗಿಂತ ಕುಂದೆನೋ ನಮ್ಮಮ್ಮ ಜಯಲಕ್ಷ್ಮಿ ಪ.
ನಿನಗಿಂತ ಕುಂದೇನೋ ಸನಕಾದಿಗಳ ಸ್ವಾಮಿ
ಮನಸಿಜನೊಡೆಯನೇ ಕನಕಗರ್ಭ[2]ನ ಜನಕ ಅ.ಪ.

ಮಚ್ಛಾ[3]ವತಾರನಾದರೆ-ಆಕೆ ಮಚ್ಛಕಂಗಳು ತಾನಾದಳು
ಹೆಚ್ಚಿನ ಶಂಖವ ಪಿಡಿದರೆ–ಆಕೆ ಸ್ವಚ್ಛ ಶಂಖಕಂಠಳಾದಳಯ್ಯ ೧

ಬೆಟ್ಟವ ನೀನೊಂದು ಪೊತ್ತರೆ-ಆಕೆ ಬೆಟ್ಟದಂಥ ಕುಚವೆರಡು
ತಾ ಪೊತ್ತಳು
ಮೆಟ್ಟಿ ಶೇಷನ ನೀ ತುಳಿದರೆ-ಆಕೆ ಕಟ್ಟಿ ಬಾಸೆಗೆ[4] ಶೇಷನ
ನಿಲಿಸಹಳಯ್ಯ ೨

ಗಜವರದ ನೀನಾದರೆ-ಆಕೆ ಗಜಗಾಮಿನಿ ತಾನಾದಳು
ನಿಜನರಸಿಂಪ ನೀನಾದರೆ-ಆಕೆ ಭಜಿಸಿ ಸಿಂಹಮಧ್ಯ[5]ಳಾದಳಯ್ಯ ೩
ನೀಲವರ್ಣ ನೀನಾದರೆ–ಆಕೆ ನೀಲಕುಂತಳೆ[6] ತಾನಾದಳು
ಲೋಲಕಮಲನಾಭನಾದರೆ– ಆಕೆ ಬಾಲಕಮಲಮುಖಿ
ಯಾದಳಯ್ಯಾ ೪

---

1 ಕುದುರೆ 2 ಹಿರಣ್ಯಗರ್ಭ 3 ಮೀನು 4 ಹೊಕ್ಕಳ ಮೇಲಿನ ಕೂದಲ
ಸಾಲು 5 ಸಿಂಹದ ಟೊಂಕ 6 ಕಪ್ಪುಗೂದಲು

ಈ ಪರಿಯಲಿ ನೀನು ಜನಿಸಿದೆಯೋ-ನಮ್ಮ ಗೋಪಿಯರ
ಮೋಹ ಸಲಿಸಿದೆಯೊ
ಅಪಾರ ಮಹಿಮನೆ ಎನಿಸಿದೆಯೋ-ನಮ್ಮ ಶ್ರೀಪತಿನೆಲೆಯಾದಿ
ಕೇಶವರಾಯನೆ ೫

೭೭

ತಕ್ಕೋ ಗಂಟ ನಿನ್ನಾಟವ ತಿಳಿಸುವೆ
ಸಖಿಯರ ಕೂಡಿದಂತಲ್ಲೋ ಪ.

ಠಕ್ಕುಬಿಕ್ಕಿನ ಮಾತುಗಳಾಡಲು
ಯುಕುತಿಯು ನಾ ಕೇಳೆನೆಲವೋ ಅ ಪ.

ಮದಗಜಗಮನೇರ ಹೆದರಿಸಿ ಬೆದರಿಸಿ
ಅಧರ[1]ವ ಸವಿದಂತಲ್ಲೋ
ಸುದತಿಯರೆಲ್ಲರ ಅಂಜಿಸಿ ವಂಚಿಸಿ
ದಧಿ[2]ಘೃತ[3] ಸವಿದಂತಲ್ಲೋ ೧

ಕ್ಷೋಣಿಯೊಳೆಲ್ಲಿಗೆ ಹೋದರು ಎನ್ನಯ
ವೀಣೆಯು ಹೊರಬೇಕಲ್ಲೋ
ಗಾಣದೆತ್ತಿನ ಪರಿಯಲಿ ತಿರುಗುತ
ತ್ರಾಣ ತಪ್ಪಲು ಬಿಡೆನಲ್ಲೋ ೨

ಸಣ್ಣಮಾತುಗಳಾಡಲು ಕೇಳುತ
ಚಿಣ್ಣನಂತಿರಬೇಕಲ್ಲೋ
ಘನ್ನಮಹಿಮ ಶ್ರೀವಿಜಯವಿಠಲ
ಇನ್ನೆಂದಿಗೂ ಬಿಡೆನಲ್ಲೋ ೩

---

1 ತುಟಿ 2 ಹಾಲು 3 ತುಪ್ಪ

## ೭೮

## ಉಗಾಭೋಗ

ನೀರೊಳಗೆ ನಿಂತು ನಿಡುಗುಪ್ಪು ನಾರುವಗೆ
ಚಾರು[1]ಕಸ್ತೂರಿ ಲೇಪನ[2]ದ ಮದವೋ ?
ಭಾರ ಬೆನ್ನಿಲಿ ಪೊತ್ತು ಕೈಕಾಲು ಮುದುರಿದಗೆ
ಧೀರ ಶೇಷಶಾಯಿಯಾದ ಮದವೋ ?
ಮೋರೆಯಲಿ ನೆಲಕೆದರಿ ಬೇರ ಮೆಲುವವಗೆ
ಸಾರ ಷಡ್ರಸ[3] ಭೋಜನದ ಮದವೋ ?
ಕ್ರೂರ[4] ಕರುಳನು ವನಮಾಲೆ ಹಾಕಿದವಗೆ
ಹಾರ ಪದಕಾದಿಗಳ ಹಾಕಿದ ಮದವೋ ?
ಮೂರಡಿಯ ಭೂದಾನ ಬೇಡಿದವಗೆ
ಸಾರಿದಭೀಷ್ಟಗಳ ಪೂರೈಪ ಮದವೋ ?
ಧಾರುಣಿಯನಿತ್ತು ಕುಳ್ಳಿರೆ ಸ್ಥಳವಿಲ್ಲದವಗೆ
ಈರೇಳು[5] ಲೋಕಗಳನಾಳ್ವ ಮದವೋ ?
ನಾರಿಯನು ಕಳಕೊಂಡು ವನವ ಸಂಚರಿಸಿದವಗೆ
ಮೂರುಧಾಮದಿ[6] ರಮೆಯ ಭೋಗದ ಮದವೋ ?
ಪೋರ[7] ನಾರಿಯರಿಂದ ಬೈಸಿಕೊಂಡವನಿಗೆ
ವಾರಿಜೋದ್ಭವಾದಿ[8] ಸುರರ ಸಂಸ್ತುತಿಯ ಮದವೋ ?
ಊರೆಲ್ಲ ನೋಡೆ ಬತ್ತಲೆ ನಿಂತವಗೆ
ಚಾರು ಪೀತಾಂಬರವುಡುವ ಮದವೋ
ಘೋರ ತುರಗವನೇರಿ ಹಾರಿಸ್ಯಾಡುವಗಿನ್ನು
ವೀರ ಸಿಂಹಾಸನದಿ ಕುಳಿತ ಮದವೋ

---

1 ಮನೋಹರ 2 ಬಳಿದುಕೊಳ್ಳುವುದು 3 ಮಧುರ, ಲವಣ, ತಿಕ್ತ (ಕಹಿ), ಕಟು, ಕಷಾಯ, ಆಮ್ಲ (ಹುಳಿ) 4 ತೀಕ್ಷ್ಣವಾದ ರುಚಿ 5 ಹದಿನಾಲ್ಕು 6 ತ್ರಿಲೋಕ 7 ತುಂಟ 8 ಬ್ರಹ್ಮ

ಮೂರು ದಿನದರಸುತನ ಸ್ಥಿರವೆಂದು ನೀ ನೆಚ್ಚಿ
ಸೇರಿದವರನು ಬಿಡುವುದು ಧರ್ಮವೇನೋ ?
ಬಾರದೆ ತಪ್ಪದೊ ಹಿಂದಣ ಬವಣೆ[1]ಗಳು
ದೂರ ವಿಚಾರಿಸೊ ಮಾರಮಣನೆ
ಶ್ರೀರಂಗರಾಜ ಗೋಪಾಲವಿಠಲ ನಿನ್ನ
ಸಾರಿದವರನು ಪೊರೆದು ಕೀರುತಿಯ ಪಡೆಯೊ

೭೮೨

ಜಯಮಂಗಳಂ ನಿತ್ಯ ಶುಭಮಂಗಳಂ ಪ.

ತೊಳಸದಕ್ಕಿಯ ತಿಂಬ ಕಿಲುಬು ತಳಿಗೆ[2]ಯಲುಂಬ
ಕೊಳಗದಲಿ ಹಣಗಳನು ಅಳೆದುಕೊಂಬ
ಇಲ್ಲ ಕಾಸು ಎಂದು ಸುಳ್ಳು ಮಾತಾಡಿದರೆ
ಎಲ್ಲವನು ಕಸುಗೊಂಬ ಕಳ್ಳದೊರೆಗೆ ೧

ತನ್ನ ನೋಡೇನೆಂದು ಮುನ್ನೂರು ಗಾವುದ ಬರೆ
ತನ್ನ ಗುಡಿಯ ಪೊಕ್ಕ ಜನರಿಗೆಲ್ಲ
ಹೊನ್ನು ಹಣಗಳ ಕೊಂಡು ತನ್ನ ದರುಶನ ಕೊಡದೆ
ಬೆನ್ನೊಡೆಯ ಹೊಯಿಸುವ ಅನ್ಯಾಯಕಾರಿಗೆ ೨

ಗಿಡ್ಡ ಹಾರುವ[3]ನಾಗಿ ಬಡ್ಡಿದಾನವ ಬೇಡಿ
ದುಡ್ಡು ಕಾಸುಗಳಿಗೆ ಕೈಯ ನೀಡಿ
ಅಡ್ಡ ಬಿದ್ದ ಜನರ ವಿಡ್ಡೂರಗಳ[4]ಕಳೆದು
ದೊಡ್ಡವರ ಮಾಳ್ಪ ಸಿರಿವಿಜಯವಿಠಲಗೆ ೩

1 ತೊಂದರೆ 2 ತಟ್ಟೆ 3 ಬ್ರಾಹ್ಮಣ 4 ಕಷ್ಟಗಳು

## ಮಧುರ ಭಾವ

### ೭೯

ಒಲ್ಲೆನವ್ವಾ ಲಕುಮಿಯ ನಲ್ಲ ಬಾರದಿದ್ದರೆ
ತನು ಹೊರೆಯನೊಲ್ಲೆನವ್ವಾ ಪ.

ಹಾರ ಕೊರಳಿಗೆ ಭಾರ, ಹೂವ್ವಿನ
ಭಾರ ಸೈರಿಸಲಾರೆನೆ
ಮಾರನಯ್ಯ[1]ನು ಬಾರದಿದ್ದರೆ
ಮಾರನಂಬಿಗೆ ಗುರಿಯ ಮಾಡಿ ೧

ಎಲ್ಲ ದೇವರ ವಲ್ಲಭನೆಂದು
ಒಲಿದೆ ಮನ ನಿಲ್ಲದೆ
ನಿಲ್ಲದೆ ರಂಗ ಪೋದ ಮಧುರೆಗೆ
ಬಿಲ್ಲ ಹಬ್ಬದ ನೆವನ ಮಾಡಿ ೨

ಮಂದಾನಿಲನ ಸಹಿಸಲಾಗದು
ನೊಂದೆ ಶುಕ ಪಿಕ ರವ[2]ಗಳಿಂದ
ಚಂದ್ರಕಿರಣದಿ ಬೆಂದೆ, ಇನ್ನೀ
ವೃಂದಾವನವೇಕವನನಗಲಿ ೩

---

1 ವಿಷ್ಣು (ಕೃಷ್ಣ) 2 ಧ್ವನಿ

ಮುನ್ನ ಆಡಿದ ಮಾತ ಮರೆತು
ಎನ್ನ ಮನದೊಳಗೀಡಾಡಿ[1]
ಮನ್ನಜಾಕ್ಷನು ಬಾರ, ಪುರದ
ಮನ್ನಿತೆಯರನು ಮೆಚ್ಚಿ ಪೋದ ೪

ಪೊಂಗೊಳಲ ಧ್ವನಿಗೆ ಸಿಲುಕಿ
ಭಂಗಬಟ್ಟೆನಂಗಜನಿಂದಲಿ
ಪೆಂಗಳಿಗುಚಿತವಲ್ಲ
ರಂಗವಿಠಲನ ತೋರದಿದ್ದರೆ ೫

೮೦

ಕೊಂಬು ಕೊಳಲನೂದುತ್ತ ನಂಬಿಸಿ ಪೋದನೆಯವ್ವ
ಅಂಬುಜನಾಭಗೆ ಮನ ಹಂಬಲಿಸುತ್ತಿದೆಯವ್ವಾ ಪ.

ನಡೆಯಲಾರೆನೆಯವ್ವಾ ಅಡಿಯಿಡಲೊಶ[2]ವಿಲ್ಲ
ಬೆಡಗುಗಾರನ ಕೂಡೆ ನುಡಿ ತೆರಳಿತ್ತೆಯವ್ವಾ ೧

ಮಾತು ಮನಸು ಬಾರದವ್ವಾ ಸೋತೆವವ್ವಾ ಕೃಷ್ಣಗಾಗಿ
ಆತನ ಕಾಣದೆ ಮನ ಕಾತರಿಸುತಿದೆಯವ್ವಾ ೨

ಅನ್ನೋದಕ ಒಲ್ಲೆನವ್ವಾ ಕಣ್ಣಿಗೆ ನಿದ್ರೆ ಬಾರದು
ಮನ್ನಣೆಗಾರನ ಕೂಡೆ ಹೆಣ್ಣುಜನ್ಮ ಸಾಕೆ ಅವ್ವಾ ೩

ಮನೆ ಮನೆ ವಾರುತೆ[3]ಗೆ ಮನವೆಳಸದೆ[4]ಯವ್ವಾ
ಮನಸಿಜ ಪಿತನೊಡನೆ ಮನ ತೆರಳಿತೆಯವ್ವಾ ೪

ಗೋಪಮ್ಮನ ವಾರುತೆ[3]ಗೆ ತಾಪ ಹಿರಿದಾಯಿತವ್ವಾ
ಗೋಪಜನರ ಕೂಡಿದ ಶ್ರೀಪತಿ ರಂಗವಿಠಲ ೫

---

1 ತೊರೆದು, ಬಿಟ್ಟು. 2 ಸ್ವಾಧೀನ 3 ಸಂಗತಿ 4 ಬಯಸದು

೮೧

ವಿಧಿ[1]ಗೆ ದಯವಿಲ್ಲವಕ್ಕ ಎಮ್ಮ ಮ್ಯಾಲೆ ಪ.

ಯದುಪತಿಯನಗಲಿಸಿದ ಒಮ್ಮಿಂದಲೊಮ್ಮೆ ಅ.ಪ.

ಎವೆ[2]ಯ ಮರೆಮಾಡಿ ಪೋದ ಯಾಕೋ ವಿಧಿಯೇ
ಸುಳಿಗುರುಳು[3] ಕಡೆಗಣ್ಣ ನೋಟದಿಂದಲಿ
ಕವಕವಿಸಿ[4] ನಗುವ ಮುದ್ದು ಮುಖವನು
ತವಕ[5]ದಿಂದ ಮರಳಿ ಮರಳಿ ನೋಡದ್ಹೋದೆವೆ ೧

ಪಕ್ಕಿಯು ಮ್ಯಾಲುಳ್ಳ ದಯ ನಮ್ಮ ಮ್ಯಾಲೆ
ಇಕ್ಕದೇಕೆ ಹೋದ್ಯೋ ವಿಧಿಯೇ
ರೆಕ್ಕೆ ಎರಡುಳ್ಳರೆ ಮಧುರೆಗೆ ಪೋಗಿ
ಫಕ್ಕನೆ ಶ್ರೀಹರಿಯೊಡನೆ ಕೂಡುತಿದ್ದೆವಲ್ಲ ೨

ತಂಗೀ ನಮ್ಮೆದೆಯು ಕಲ್ಲಾಗಿ ಇದ್ದೇವೆ
ಹಿಂಗು[6]ವರೆ ಸಖಿಯರು ಒಮ್ಮಿಂದಲೊಮ್ಮೆ
ರಂಗವಿಠಲನ್ನ ಅಂಗಸಂಗವ ಬಿಟ್ಟು ಇಂಥ
ಭಂಗ ಜೀವ ಸುಡಸುಡಸುಡಲ್ಯಾತಕೋ ೩

೮೨

ಎಂದೆಂದೆನ್ನ ಮನದಿಂದ ಆಗಲದಿರೋ
ನಂದನಂದನನೆ ಆನಂದ ಮೂರುತಿಯೆ ಪ.

---

1 ದೈವ 2 ಕಣ್ಣರೆಪ್ಪೆ 3 ಗುಂಗುರುಗೂದಲು 4 ಗಹಗಹಿಸಿ
5 ಆತುರ, ಕಾತರ. 6 ಹಿಂದುಳಿ

7

ಬಹುಕಾಲ ನಿನ್ನ ಶ್ರವಣ[1]ವೆಂಬ ಹೊನ್ನೋಲೆಯ
ಬಹುಮಾನದಿಂದೆನ್ನ ಕಿವಿಯೊಳಿಟ್ಟು
ಮಹಿತ ಮಂಗಳ ಸೂತ್ರವೆಂಬೊ ದಾಸ್ಯವನ್ನು
ಮಹದಾನಂದದಿ ಎನ್ನ ಕೊರಳೊಳ್ ಕಟ್ಟಿದೆಯಾಗಿ ೧

ಸುಲಲಿತ ಸ್ಮರಣೆಯೆಂಬ ಭೂಷಣವಿತ್ತು
ಸಲಹಿದೆ ಬಹುಪ್ರೀತಿ ಸಖಿಯಿಂದೆನ್ನ
ಬೆಲೆಯಿಲ್ಲದ ಸುಜ್ಞಾನ ನಿಧಿಯನಿತ್ತು
ಜಲಜಾಕ್ಷ ಎನ್ನನು ಒಲಿದು ಆಳಿದೆಯಾಗಿ ೨

ಎಲ್ಲಿ ನೀ ನಿಲಿಸಿದರೆನಗೇನು ಭಯವಿಲ್ಲ
ಬಲ್ಲೆನೊ ವಿಶ್ವವ್ಯಾಪಕನೆಂಬುದ
ಸಲ್ಲದೊ ಈ ಮುನಿಸೆನ್ನೊಳು ಸಿರಿಕೃಷ್ಣ
ಒಲ್ಲದಿದ್ದರೆ ನಿನ್ನ ಸೆರಗ ಪಿಡಿದೆಳೆವೆ ೩

೮೩

ಯಾಕೆ ಬೃಂದಾವನ ಯಾಕೆ ಗೋಕುಲ ನಮಗೆ
ಯಾಕೆ ಬಂದೆಯೋ ಉದ್ಧವ ಪ.

ಯಾಕೆ ಸ್ನೇಹದ ಮಾತು ಲೋಕ ಮೋಹಕ ತಾನು
ಆ ಕುಬ್ಜೆಯನು ಕೂಡಿದ ಉದ್ಧವ ಅ.ಪ.

ಬಿಲ್ಲುಗಾರ[2]ನಯ್ಯನ ಬ್ಯಾಟೆನಗೆ ನಡೆನೋಟ
ಇಲ್ಲದಂತಾಯಿತಲ್ಲ

1 ಕೇಳುವಿಕೆ 2 ಮನ್ಮಥ

ತಲ್ಲಣಿಸುತ್ತಿದೆ ತಾಪ ಮೈಯೊಳು ಹೆಚ್ಚಿ
ಪರವಶವಾಯಿತಲ್ಲ
ಎಲ್ಲರನಗಲಿಸಿದ ಖುಲ್ಲ[1] ಅಕ್ರೂರ ನಮ್ಮ
ವಲ್ಲಭನ ಕರೆದೊಯ್ದನೋ
ಮಲ್ಲರ ಮರ್ದಿಸಿದ ಮಾವ ಕಂಸನ ಕೊಂದ
ವಲ್ಲಭನ ತೋರಿಸಯ್ಯ ಉದ್ಧವ ೧

ಅನುದಿನವಾದರಿಸಿ ಅಧರಾಮೃತವನಿತ್ತು
ಆನಂದವನು ತೋರುವ
ಮನದ ಮರ್ಮ[2]ವ ತಿಳಿದು ಮನಸಿಜನಯ್ಯನು
ಮಧುರ ಮಾತಿಲಿ ದಣಿಸುವ
ಕನಸಿನೊಳು ಕಂಡ ತೆರನಾಯಿತು ನೋಡು
ಮುನಿವಂದ್ಯ ತಾನೆ ಬಲ್ಲ
ವನಜಾಕ್ಷ ವಾಸುದೇವನ ತಂದು ತೋರಿಸಿ
ಒಡಗೂಡಿಸಯ್ಯ ನೀನೆ ಉದ್ಧವ ೨

ಕರುಣಾಬ್ಧಿಯೆಂಬರಾ ಕಪಟನಾಟಕದವನ
ಸರಸ ವಿರಸ ಮಾಡಿದ
ಸ್ಮರಿಸಿದವರ ಕಾಯ್ವ ಶರಣಜನ ಪಾಲಕ
ಮರೆತನೇತಕೋ ಎಮ್ಮನು
ತ್ವರಿತ[3]ದಿಂದಲಿ ಪೋಗಿ ತರುಣೇರ ಗೋಳ್ಹೇಳಿ
ಬರಮಾಡಬೇಕೆಂಬೆವೊ
ನೆರೆನಂಬಿದವರನ್ನು ಪೊರೆವ ಶ್ರೀಕೃಷ್ಣಗೀ
ಪರಿಯೆಲ್ಲ ಪೇಳಿ ಬಾರೋ-ಉದ್ಧವ ೩

---

1 ದುಷ್ಟ 2 ರಹಸ್ಯ 3 ವೇಗ

೮೪

ಇದು ಬಲಸುಖ ಕಾಣೆ ಕೇಳಿಡಕಿಣೆಗಾಣೆ ಪ.

ಒದಗಿಬರುವ ಮೃತ್ಯುವ ಪರಿಹರಿಸುವ
ಪದುಮನಾಭನ ಪದಪದುಮಕ್ಕೆರಗುವ ಅ.ಪ.

ಚಂಚಲ ಸಿರಿಗಾಗಿ ಲೋಕ ಪ್ರ-
ಪಂಚಕೆ ಬೆರಗಾಗಿ
ಸಂಚಿತ[1] ಕರ್ಮವ ಕಳೆಯದೆ ಕಾರ್ಯವು
ಮಿಂಚಿದ ಬಳಿಕಾಯಾಸಕ್ಕಿಂತಲು ೧

ಚಿಂತೆಯೆಲ್ಲವ ಕಳೆದು ಮನದಿ ನಿ-
ಶ್ಚಿಂತೆಯಾಗಿ ನಲಿದು
ಅಂತರಂಗದಿ ಲಕ್ಷ್ಮೀಕಾಂತನ ತುತಿಸು[2]ತ
ಸಂತೋಷಶರಧಿ[3]ಯೋಳೋಲ್ಯಾಡುವುದು ೨

ಶರಣಜನರ ಪೊರೆವ ದ್ವಾರಕಾ
ಪುರವರದಲಿ ತಾನಿರುತಿರುವ
ಪರಮ ಪುರುಷ ನಮ್ಮ ಸಿರಿಕೃಷ್ಣರಾಯನ
ಮುರಳೀಧರನ ಸೇವಿಸಿ ಸುಖಿಯಾಗುವ ೩

೮೫

ಕಾಣದೆ ನಿಲ್ಲಲಾರೆ ಕಮನೀಯ[4] ಮೂರುತಿಯ
ಪ್ರಾಣೇಶನ ತೋರೆ ಗಿಣಿಯೆ ಪ.

ಮಾಣಿಕ್ಯ ಪದಕವ ಮನ್ನಿಸಿ ನಿನಗೀವೆ
ಜಾಣೆ ಕೃಷ್ಣನ ತೋರೆ ಗಿಣಿಯೆ ಅ.ಪ.

---

1 ಕೂಡಿಟ್ಟಿರುವ 2 ಕೊಂಡಾಡು 3 ಸಮುದ್ರ 4 ಮನೋಹರ

ಮಕರಕುಂಡಲಧರನ ಮಕರಧ್ವಜ[1] ಪಿತನ
ಮಕುಟ[2] ಭೂಷಣನ ತೋರೆ ಗಿಣಿಯೆ
ಮಕರಾಕ್ಷ ಸಂಹರನ ಮಕರಾರಿ[3] ರಕ್ಷಕನ
ಮಕರ[4] ಶಿಕ್ಷಕನ ತೋರೆ ಗಿಣಿಯೆ ೧

ಇಂದುಕುಲ[5] ಪಾವನನ ಇಂದು ರವಿ ಲೋಚನ[6]ನ
ಇಂದು ನೀ ಕರೆತಾರೆ ಗಿಣಿಯೆ
ಇಂದುಶೇಖರ[7] ಇಂದಿರೆಯರಸನ
ತಂದು ತೋರೆ ಮುದ್ದು ಗಿಣಿಯೆ ೨

ಒಂದು ನಿಮಿಷವೊಂದು ಯುಗವಾಗಿ ತೋರಿತೆ
ಸೌಂದರ್ಯನ ತೋರೆ ಗಿಣಿಯೆ
ಮಂದಮಾರುತ ಸೋಕೆ ಮರುಳುಗೊಂಡೆನೆ ಎನ್ನ
ಮಂದಿರಕೆ ಕರೆತಾರೆ ಗಿಣಿಯೆ ೩

ಕಾಯಜನ ಬಾಣದಲಿ ಕಾಯವೆಲ್ಲವು ಬಹಳ
ಗಾಯವಾಯಿತು ನೋಡೆ ಗಿಣಿಯೆ
ಮಾಯೆಗಳ ಮಾಡದೆ ಮಮತೆಯಿಂದಲಿ ಎನ್ನ
ನಾಯಕನ ಕರೆತಾರೆ ಗಿಣಿಯೆ ೪

ಪಂಕಜೋದ್ಭವ ಪಿತನ ಪಂಕಜನಯನನ
ಪಂಕಜನಾಭನ ತೋರೆ ಗಿಣಿಯೆ
ಪಂಕಜಾಕ್ಷ ಸಿರಿಕೃಷ್ಣನ ಪದಪದ್ಮ
ಶಂಕೆಯಿಲ್ಲದೆ ತೋರೆ ಗಿಣಿಯೆ ೫

---

1 ಮನ್ಮಥ 2 ಕಿರೀಟ 3 ಗಜೇಂದ್ರ (?) 4 ಮೊಸಳೆ 5 ಚಂದ್ರವಂಶ

೮೬

ಶ್ರೀರಂಗ ಬಾರನೆ ಪ.

ಕರೆದರಿಲ್ಲಿ ಬಾರನೆ ಕಾಂತೆ ಮುಖವ ತೋರನೆ ಮ
ಧುರಪುರದ ಅರಸನೆ ಕೂಡಿ ಎನ್ನ ರಮಿಸನೆ ಅ.ಪ.

ಮುನಿಸು,ಮನದಲ್ಲಿಟ್ಟನೆ ಮೋಹವನ್ನು ಬಿಟ್ಟನೆ
ಮನದಿ ಛಲವ ತೊಟ್ಟನೆ ಮನೆಗೆ ಬಾರದೆ ಬಿಟ್ಟನೆ ೧

ಎಂತು ನಂಬಿ ಇದ್ದನೆ ಎಂತು ಗುರುತು ಮರೆತನೆ
ಪಂಥ[1]ವ್ಯಾತಕೆ ಕಲಿತನೆ ಕಾಂತೇರ ಕೂಡಿ ಮೆರೆದನೆ ೨

ಸೋಳಸಾಸಿರ[2] ಗೋಪಿಸಹಿತ ಜಲದಲಾಡಿ ಪೋದನೆ
ಸೆಳೆದು ಒಬ್ಬಳ ಒಯ್ದನೆ ಚೆಲುವ ಹಯವದನನೆ ೩

೮೭

ಎಲೆ ಸಖಿಯೆ ಪೋಗು ವಿಠಲನ ಬಳಿಗೆ
ಬೇಗವನ ತಾರೆ ಎನ್ನ ಮನೆಗೆ ಪ.

ಚಂದ್ರ ಉದಿಸುತಲಿ ಬಂದ ರಂಜಿಸುತರ
ವಿಂದಬಾಣ[3] ನಡೆತಂದ
ಮಂದಮಾರುತ ಮುಂದೆ ನಿಂದ ಅವ ಕುಸುಮ
ಗಂಧದಿಂದಲೆನ್ನ ಕೊಂದ ೧

ಕೀರ[4] ನುಡಿಯುತಿಪ ಧೀರ ಕೋಕಿಲೆಯ
ಸ್ವರ ಕರ್ಣಕಠೋರ
ಮಾರ, ಬೇಗ ಹರಿ ಬಾರದಿರೆ ಕೆಳದಿ
ಕ್ರೂರ ಎನ್ನ ಕೊಲ್ಲದಿರ ೨

---

1 ಹಠ 2 ಹದಿನಾರು ಸಾವಿರ 3 ಮನ್ಮಥ 4 ಗಿಳಿ

ಜೀಯ ಸುಜನರ ಸಹಾಯ ನಿಗಮಕುಲ[1]
ಗೇಯ[2] ನಿರ್ಧೂತ[3] ಹೇಯ[4]
ಪ್ರಿಯ ಹಯವದನರಾಯ ಸಖಿ ಎನ್ನ
ಕಾಯಲಿನ್ನೇನು ಉಪಾಯ

೮೮

ಮರುಳು ಮಾಡಿಕೊಂಡೆಯಲ್ಲೆ ಮಾಯಾದೇವಿ[5]ಯೆ ಪ,
ಇರುಳು ಹಗಲು ಏಕವಾಗಿ ಹರಿಯು ನಿನ್ನ ಬಿಡದಿಪ್ಪಂತೆ ಅ.ಪ.

ಜ್ಞಾನಿಗಳು ನಿತ್ಯ ಅನ್ನ ಪಾನಾದಿಗಳನ್ನು ಬಿಟ್ಟು
ನಾನಾ ವಿಧ ತಪವಿದ್ದರು ಧ್ಯಾನಕ್ಕೆ ಸಿಲುಕದವನ ೧
ಸರ್ವಸಂಗವನು ಬಿಟ್ಟು ಸಂನ್ಯಾಸಿಯಾದಕಾಲಕ್ಕು
ಸರ್ವದಾ ತನ್ನೆದೆಯ ಮೇಲೆ ಬಿಡದೆ ನಿನ್ನ ಧರಿಸಿಪ್ಪಂತೆ ೨
ಪ್ರಳಯ ಕಾಲದಲ್ಲಿ ಆಲದೆಲೆಯ ಮೇಲೆ ಮಲಗಿದ್ದಾಗ
ಹಲವು ಆಭರಣಂಗಳು ಜಲವು ಆಗಿ ಜಾಣತನದಿ ೩
ರಂಗನು ಭೂಲೋಕದಿ ಭುಜಂಗಗಿರಿ[6]ಯೊಳಲಮೇಲು
ಮಂಗಮತಿಯಾಗಿ ನಿನ್ನ ಅಂಗೀಕರಿಸುವಂತೆ ೪
ಮಕ್ಕಳ ಪಡೆದರೆ ನಿನ್ನ ಚೊಕ್ಕತನವು ಪೋಪುದೆಂದು
ಪ್ರೊಕ್ಕುಳೊಳು ಮಕ್ಕಳ ಪಡೆದು ಕಕ್ಕುಲಾತಿ[7] ಪಡುವಂತೆ ೫
ಎಡಕೆ ಭೂಮಿ ಬಲಕೆ ಶ್ರೀಯು ಎದುರಿನಲ್ಲಿ ದುರ್ಗಾದೇವಿ
ತೊಡೆಯ ಮೇಲೆ ಲಕುಮಿಯಾಗಿ ಬಿಡದೆ ಮುದ್ದಾಡಿಸುವಂತೆ೬
ಎಂದೆಂದಿಗೂ ಮರೆಯ ನಿನ್ನಾನಂದದಿ ಜನರಿಗೆಲ್ಲ
ತಂದುತೋರೆ ಸ್ವಾಧೀನ ಪುರಂದರವಿಠಲರಾಯನ ೭

---

1 ವೇದಸಮೂಹ 2 ಸ್ತುತ್ಯ 3 ನಿವಾರಿಸಲ್ಪಟ್ಟ 4 ತುಚ್ಛ 5 ಲಕ್ಷ್ಮಿ
6 ತಿರುಪತಿಯ ಬೆಟ್ಟ 7 ಮೋಹ

೮೯

## ಸುಳಾದಿ

### ಧ್ರುವತಾಳ

ಅಚ್ಯುತ ಸುಳಿದ ಎನ್ನ ಕಣ್ಣಮುಂದೆ ಅವ್ವ
ಕಸ್ತೂರಿ ಮೃಗದಂತೆ ಘಮಘಮಿಸುತ
ಅನಂತ ಸುಳಿದ ಎನ್ನ ಕಣ್ಣಮುಂದೆ
ದಿವಾಕರ[1] ಕಿರಣದಂದದಿ ಬೆಳಬೆಳಗುತ್ತ
ಮಾಧವ ಸುಳಿದ ಎನ್ನ ಕಣ್ಣಮುಂದೆ ಅವ್ವ
ನಗುತ ನಲಿದು ಮೇಲುವರಿದೆ[2]ನ್ನನಪ್ಪುತ
ಏನೆಂಬೆ ಏನೆಂಬೆ ಏನೆಂಬೆ ಅವ್ವ
ಎನ್ನ ಸೂರೆಗೊಂಡ ಸೆರೆಗೊಂಡ
ಉಂಬತ್ತೂರ ಚೆನ್ನಯ್ಯ ಪುರಂದರ ವಿಠಲ ೧

### ಮಠ್ಯತಾಳ

ಮಧುರಾ ಪಟ್ಟಣದ ರಾಜಬೀದಿಯಲ್ಲಿ ರಾಮ
ಸುದಾಮರೆಲ್ಲ ಕೂಡಿ ಕೈಪೊಯ್ದು ನಗರೆ ಕುಬುಜೆಯು
ಕೂಡೆ ಕಾಕು ಪೋಕಿನ[3] ಮಾತು
ಸನ್ನೆ ಸನ್ನೆಯು ನೋಟ ನಗು ತಾಕಿನಾಟ
ಉಂಬತ್ತೂರ ಚೆನ್ನಯ್ಯ ಪುರಂದರವಿಠಲ ೨

### ಆದಿತಾಳ

ಆರ ಮಡಿಯನುಟ್ಟು ಆರ ಗಂಧವ ತೊಟ್ಟು
ಆರ ಪೂಗಳ ಮುಡಿದು ಬಲ್ಲಿದರಿಗೆ
ಬಟ್ಟೆ ಸಸಾರವೆಂಬಂತೆ ಉಂಬತ್ತೂರ
ಚೆನ್ನಯ್ಯ ಪುರಂದರವಿಠಲ ೩

---

1 ಸೂರ್ಯ 2 ಮೇಲೆಬಿದ್ದು 3 ಪೊಳ್ಳು

### ಆಟತಾಳ

ಸುಳಿದರೆ ಸುಂಕವ ಕೊಂಬ ಜಾಣರಾಯ
ಪರಿಯಲ್ಲದಾರು ಪೇಳೆಲೆ ಅವ್ವ
ಯಶೋದೆರಂಗನಲ್ಲದೆ ಗೋಪಮ್ಮ
ಕೃಷ್ಣನಲ್ಲದೆ ಅದಾರು ಪೇಳೆ
ಕೃಷ್ಣನಲ್ಲದೆ ಅದಾರು ಪೇಳೆ
ಉಂಬತ್ತೂರ ಚೆನ್ನಯ್ಯ ಪುರಂದರವಿತಲ ೪

### ಏಕತಾಳ

ಕೊಂಬು ಕೊಳಲು ತುತ್ತೂರಿ ಮೌರಿ
ಸಂಭ್ರಮದಲಿ ಗೋಪಾಲಕರು ಕೂಡಿ
ಭೋಂ ಭೋಂ ಭೋಂ ಭೋಂಬೆನುತ್ತ
ಸರಿಗಮಪದನಿಸ
ತುತ್ತೂರು ತುರುರೆನುತಲಿ
ಝುಂ ಝುಂ ಝುಂ ಝುಮ್ಮೆನುತ್ತ
ಉಂಬತ್ತೂರ ಚೆನ್ನಯ್ಯ ಪುರಂದರವಿತಲ ೫

### ಜತೆ

ನಿನ್ನ ಪಾದವೆ ಗತಿ ಎನ್ನ ನೀ ಸಲಹಯ್ಯ
ಉಂಬತ್ತೂರ ಚೆನ್ನಯ್ಯ ಪುರಂದರವಿತಲ

### ೯೦

ವಾಸಕೆ ಯೋಗ್ಯವಲ್ಲ ಗೋಕುಲವಿನ್ನು ಬೇಸರಾಯಿತಲ್ಲ ಪ.

ದೋಷರಹಿತ ಸೋಳಸಾಸಿರ[1] ಹೆಂಗಳ
ಶೇಷಶಯನ ಕೃಷ್ಣ ಮೋಸಮಾಡಿದ ಮೇಲೆ ಅ.ಪ.

---

1 ಹದಿನಾರು ಸಾವಿರ

ರಂಗಮಧುರೆಗೆಂದು ಅಕ್ರೂರನ
ಸಂಗಡ ಪೋದನಂತೆ
ಅಂಗಜನಮ್ಮನ ಸಂಗವಿಲ್ಲದ ಮೇಲೆ
ಹೆಂಗಳ ಜನ್ಮವಿನ್ನೇತಕೆ ಸುಡಲಿ ೧

ನಳಿನಾಕ್ಷ ಮಧುರೆಗೆಂದು ಪೋಗುವಂಥ
ಸುಳಿವು ತಿಳಿಯಲಿಲ್ಲವು
ಅಳಿ[1] ಗಿಳಿ ಕೋಗಿಲೆಗಳ ರವವನು ಕೇಳಿ
ಗಳಿಗೆ ಕಳೆವುದೊಂದು ಯುಗವಾದ ಬಳಿಕಿನ್ನು ೨

ಪತಿಸುತರನ್ನು ಬಿಟ್ಟು, ಶ್ರೀಪತಿ ನೀನೆ
ಗತಿಯೆಂದು ನಂಬಿರಲು
ಮತಿವಂತಅಕ್ರೂರನ ಜೊತೆಯೊಳು ಶ್ರೀಹರಿ
ರಥವೇರಿ ತಾನು ಮಧುರೆಗೆ ಪೋದ ಮೇಲೆ ೩

ಮಡದಿಯರಂತೆ ನಾವು ಒಡೆಯನೆಂದು
ದೃಢದಿ ನಂಬಿದ್ದೆವಮ್ಮ
ಕಡು ಚೆಲ್ವ ಕೃಷ್ಣ ನುಡುನೀರಿಲಿ ಕೈಯು
ಪಿಡಿಯದೆ ಬಿಟ್ಟು ತಾ ಕಡೆಗೆ ಸಾರಿದ ಮೇಲೆ ೪

ಅಚ್ಯುತಾನಂತನನ್ನು ನಮ್ಮವನೆಂದು
ನೆಚ್ಚಿಕೊಂಡಿದ್ದೆವಮ್ಮ
ಮೆಚ್ಚಿನ ಬಾಲೆಯರಿಗ್ಹುಚ್ಚು ಹಿಡಿಸಿ ಕ್ರೂರ
ಹೆಚ್ಚಿನ ಮಳಾತನು ಕೊಚ್ಚಿ ಪೋದ ಮೇಲೆ ೫

1 ದುಂಬಿ

ಮುರಳಿನಾದವ ಕೇಳಿ ತರಳಾಕ್ಷಿಯರು
ಮರುಳಾಗಿ ಬರುತಿದ್ದೆವೆ
ದುರುಳ ಮನ್ಮಥನ ಪೂಸರಳಿಗೆ ಒಪ್ಪಿಸಿ
ಇರುಳೇ ಮಧುರೆಗೆ ತೆರಳಿ ಪೋದ ಮೇಲೆ ೬

ಸುರತ ಸುಖಗಳೆಂಬ ಶರಧಿಯೊಳು
ಹರುಷಪಡುತಲಿದ್ದೆವೆ
ನಿರುತ ಅವನ ಗುಣಚರಿತೆಯು ತೋರದೆ
ತ್ವರಿತ[1]ದಿ ನಮ್ಮನು ತೊರೆದು ಪೋದ ಮೇಲೆ ೭

ಕಂತುಪಿತನ ಕಾಣದೆ ಪ್ರಾಣವು
ಎಂತು ನಿಲ್ಲುವುದಮ್ಮ
ಅಂತರಂಗದ ಕಾಮ ಶಾಂತಮಾಡದೆ ಪೋದ
ಕಾಂತನ ಕಾಣದೆ ಭ್ರಾಂತರಾದ ಮೇಲೆ ೮

ಇಂದಿರಾಪತಿ ನಮ್ಮ ಮಂದಿರದೊಳು
ಬಂದು ಪೋಗುತಲಿರಲು
ಸಂದೇಹದಿ ಇವನ ಹೊಂದಿದರಿವರೆಂದು
ಮಂದಿಯೊಳಗೆ ಅಪನಿಂದೆ ಪೊತ್ತೆವಮ್ಮ ೯

ಜಾರೆ[2]ಯರಾದರೆಂದು ನಮ್ಮವರೆಲ್ಲ
ಸಾರಿ ಕೈಬಿಟ್ಟರಮ್ಮ
ವಾರಿಜಾಕ್ಷನು ಬರಿ ದೂರಿಗೆ ಗುರಿಮಾಡಿ
ದಾರಿ ತೋರದೆ ಪೋದನಾರ ಸೇರುವೆವಮ್ಮ ೧೦

1 ಬೇಗ 2 ಹಾದರಗಿತ್ತಿ

ಬೆರೆವುದಿನ್ನೆಂದು ನಾವು ಶ್ರೀಹರಿ ಸಂಗ
ದೊರೆವುದಿನ್ನೆಂದಿಗಮ್ಮ
ಕರುಣಾಕರ ನಮ್ಮ ಪುರಂದರವಿಠಲನು
ಕರೆದುಕೊಳ್ಳದೆ ನಮ್ಮ ತೊರೆದು ಹೋದ ಮೇಲೆ ೧೧

೯೧

ತೋರೆ ಬೇಗನೆ ಸಖಿ ತೋರ[1] ಮುತ್ತಿನ ಹಾರ
ಭಾರವಾಗಿದೆ ಎನಗೆ ಪ.

ಈರೇಳು ಲೋಕವ ಪೊರೆವ ದಯಾನಿಧಿ
ಬಾರನೇತಕೆ ಮನೆಗೆ ಓ ಸಖಿಯೆ ಅ.ಪ.

ತರಣಿತನಯನ ಸುತನ ಬಾಯೊಳನೃತವ[3]
ಭರದಿಂದ ನುಡಿಸಿದನ
ತರಣಿಸುತನ ಬಾಣವೆರಗದಂದದಿ ರಥವ
ಧರೆಗೆ ಒತ್ತಿದ ದೇವನ
ತರಣಿಯ ಮರೆಮಾಡಿ ಶಿರವ ತರಿಯುವಂತೆ
ನರಗೆ ಸೂಚಿಸಿದಾತನ
ತರಣಿಯೊಡನೆ ಪಂಥವಾಡಿ ತಿರುಗಿದನ
ತನಯನಳಿದನ ತೋರಿಸೆ ಸಖಿಯೆ ೧

ಗೋತ್ರ[3] ಭೇದಿಸುತನ ಹೆಂಡಿರ ಮಗನ
ಮಾತುಳ[4]ನಾದವನ
ಕತ್ತಲೆಯಲಿ ಪೋಗಿ ಕುತ್ತಿಟ್ಟವನ[5] ಮೈಯ
ಸುತ್ತಿ ಬಾಧಿಸುತಿಪ್ಪನ

1 ದೊಡ್ಡ 2 ಸುಳ್ಳು 3 ಪರ್ವತ 4 ಸೋದರಮಾವ 5 ಶಿವಿ

ತತ್ವವನರಿತು ಸುತತ್ವವ ಬೋಧಿಸಿ
ಉತ್ತರವಿತ್ತವನ
ಮುತ್ತಯ್ಯ[1]ನ ತಾಯಿ ಪಿತೃ ದೇವನ ಎ–
ನ್ನತ್ತಿರ ಕರೆದು ತಾರೆ ಓ ಸಖಿಯೆ ೨

ವರಮುನಿಗಳು ಕೂಡಿ ಸರ್ವೋತ್ತಮನಾರೋ
ಪರಿಶೋಧಿಸಬೇಕೆಂದು
ಭರದಿಂದ ಭೃಗುಮುನಿ ಬಂದು ಕೋಪಿಸೆ ಬೇಗ
ಚರಣವನೊತ್ತಿದನ
ಪರಿಪರಿಯಲಿ ದೇವ ಪರಮ ಭಕ್ತರ ಕಾವ[2]
ಸುರರಿಗಭಯವಿತ್ತನ
ವರ ಕಾಗಿನೆಲೆಯಾದಿಕೇಶವರಾಯನ
ಮರೆಯಲಾರೆನೆ ಮನದಿ–ಎಂದೆಂದಿಗು ೩

೯೨

ರಂಗನೆಂಥವನೆಂಥವನೆಲೆ ತಂಗಿ ಪ.

ರಂಗನೆಂಥವ ಅವನಂಗ ತಿಳಿಯದು ಬ್ರಹ್ಮಾದಿಗಳಿಗೆ ಅ.ಪ.

ಆಗಮ[3]ವ ತಂದಿಹನೆ–ರಂಗ
ಬೇಗದಿ ಗಿರಿಯ ಪೊತ್ತಿಹನೆ
ಮೂಗಿಂದ ಭೂಮಿಯ ಕಿತ್ತಿಹನೆ–ಕಂದ
ಕೂಗಲು ಕಂಬದಿ ಬಂದ ಕಾಣಕ್ಕ ೧

---

1 ಅಜ್ಜ 2 ರಕ್ಷಿಸು 3 ವೇದ, ಶಾಸ್ತ್ರ.

ಧರೆಯ ಈರಡಿ[1] ಮಾಡಿದನೆ–ಭೂ
ಸುರರಿಗೆ ದಾನವ ನೀಡಿದನೆ
ನೆರೆದು ಕಪಿ ಹಿಂಡು ಕೂಡಿದನೆ–ಫಣಿ
ಶಿರ[2]ದಲ್ಲಿ ಕುಣಿಕುಣಿದಾಡಿದನಕ್ಕ ೨

ಉಟ್ಟದ್ದು ಬಿಟ್ಟು ತಾ ನಿಂತಿಹನೆ–ರಂಗ
ದಿಟ್ಟದ ಕುದುರೆಯನೇರಿದನೆ
ದುಷ್ಟರನೆಲ್ಲ ಅಳಿ[3]ದಿಹನೆ–ನಮ್ಮ
ಬಿಟ್ಟಾದಿಕೇಶವರಾಯ ಕಾಣಕ್ಕ ೩.

೯೩

ನಿನ್ನನಗಲಿ ಪೋಗಲಾರೆವೋ ನೀರಜಾಕ್ಷ
ನಿನ್ನ ಸೇರಿ ಸುಖಿಸಬಂದೆವೋ ಪ.

ಮನ್ನಿಸದೆ ಮಮತೆಯಿಂದ ಭಿನ್ನ ನುಡಿಗಳಾಡಿ ನಮಗೆ
ಹಣ್ಣು ತೋರಿ ಕಾಳಕೂಟ[4]ವನ್ನು ಕೊಡುವರೇನೋ
ಕೃಷ್ಣ ಅ.ಪ.

ಐದು[5]ವುದಕೆ ಶಕ್ಯ[6]ವಲ್ಲದ ಅಪ್ರಮೇಯ[7]
ಆದಿಪುರುಷ ಅಮರ ಸನ್ನುತ
ಶ್ರೀದ[8] ನಮ್ಮ ಕೈಯ ಬಿಡದೆ ಆದರಿಸಬೇಕು ಪರ
ರಾದರೇನು ನಿನ್ನ ಶರಣರಾದ ಮೇಲೆ ಬಿಡುವುದುಂಟೆ ೧

ಬಂಧುವರ್ಗವನ್ನು ಬಿಡುವುದು ಸ್ತ್ರೀಯರಿಗೆ
ನಿಂದ್ಯವೆಂದು ಶಾಸ್ತ್ರ ಪೇಳ್ವುದು
ಎಂದಿಗೆಂದಿಗೆಮಗೆ ನೀನೆ ಬಂಧುವೆಂದು ಬಂದಿಹೆವೊ
ಸಿಂಧುಶಯನ ಎಮ್ಮನ್ಯಾಕೆ ಇಂದು ಹೋಗಿರೆಂಬೆ ನೀನು ೨

---

1 ಎರಡು ಹೆಜ್ಜೆ 2 ಹಾವಿನ ಹೆಡೆ 3 ಸಂಹಾರ 4 ವಿಷ 5 ಸೇರು
6 ಸಾಧ್ಯ 7 ಅಳತೆಗೆ ಮೀರಿದ 8 ಸಂಪತ್ತನ್ನು ಕೊಡುವವನು

ಶಮ[1]ದಮಾ[2]ದಿ ಗುಣಗಳಿಂದಲಿ ಸಜ್ಜನರು
ಕ್ರಮದಿ ನಿನ್ನ ಮೂರ್ತಿಮನದಲಿ
ಮಮತೆಯಿಂದ ಪೂಜಿಸುತ್ತ ಗಮಿಸು[3]ವರೊ ನಿನ್ನ ಪುರಕೆ
ನಮಗೆ ಪಾತ್ರ ಪತಿಸುತಾದ್ಯರಮಿತ[4] ಸುಖವ ಕೊಡುವ
ರೇನೋ ೩

ಮೋಕ್ಷ ಇಚ್ಛೆಯಿಂದ ನಿನ್ನನು ಭಜಿಪ ಜನರಾ
ಪಕ್ಷ ವಹಿಸಿದಂತೆ ನಮ್ಮನು
ರಕ್ಷಿಸದೆ ಬಿಡುವರೇ ಕಟಾಕ್ಷ[5]ದಿಂದ ಈಕ್ಷಿಸದೆ
ಲಕ್ಷ್ಮೀದೇವಿ ನಿಮಗೆ ಬಹಳಾಪೇಕ್ಷೆಯಿಂದ ಮೋಹಿಸಿದಳೆ ೪

ಅನಘ[6] ನಿನ್ನ ನೋಡಿ ಮೋಹಿನಿ ಅಂತರಾತ್ಮ
ತನುವು ಮನವು ನಿನಗೆ ಅರ್ಪಿಸಿ
ಜನನ ಮರಣದಿಂದ ಜನರು ದಣಿವರೇನೋ ಕಾಂತ ನಮ್ಮ
ಮನಸಿನಂತೆ ಒಲಿದು ಸಲಹೊ ವನಜನಾಭ ವಿಜಯ
ವಿಠಲ ೫

೯೪

ತಾರೋ ವಸನ[7]–ಎಷ್ಟು ವಿನೋದ ಪ.

ಕಡಹ[8]ದ ಮರನೇರಿ ಕಾಡುವುದುಚಿತವೆ
ತಡವಾಗುವುದೈ ಒಡೆಯರುಳ್ಳವರಿಗೆ ೧

ಚಿತ್ರಚಿತ್ರಜನಯ್ಯನೆ ಮತ್ತಗಜಗಮನೆಯರ
ಬತ್ತಲೆ ನಿಲಿಸುವುದುತ್ತಮವಲ್ಲವೇ ೨

ಪರಮ ಪುರುಷ ನಿನ್ನವರು ಎಂದಿಗು ನಾವು
ಕರುಣಿಸು ಎಮ್ಮ ಸಿರಿ ಪುರಂದರವಿಠಲ ೩

---

1 ಇಂದ್ರಿಯ ಸಂಯಮ 2 ಮನೋನಿಗ್ರಹ 3 ಹೋಗು 4 ಅಪಾರ
5 ನೋಟ 6 ಪಾಪಲೇಪವಿಲ್ಲದವನು 7 ಬಟ್ಟೆ 8 ಕದಂಬ ವೃಕ್ಷ

೯೫

ನಾಳೆ ಬರುವೆನೆಂದು ಹೇಳಿ ಮಧುರೆಗೆ ಪೋದ, ಬ
ಹಳ ದಿನವಾಯಿತಲ್ಲೊ ಉದ್ಧವ ಪ.

ಕೇಳಿದ್ಯಾ ನೀ ಬಾಹ ವೇಳೆಯಲಿ ಕೃಷ್ಣನ
ಆಲೋಚನೆಯೊಳಿದ್ದೆವೊ ಅ.ಪ.

ಪಳ್ಳಿವಾಸಿಗಳು ನಾವು ಪರಿಪರಿ ಅಲಂಕರಿಸಿ
ಒಲಿಸಿಕೊಂಬುದನರಿಯೆವೋ
ಗೊಲ್ಲ ಸತಿಯರು ಸದಾ ಗೋರಕ್ಷಕರು ಮೈಯಿ
ಹೊಲೆ ತೊಳೆಯಲರಿಯೆವೋ
ಬಲ್ಲಿದನ ಸಹವಾಸ ಮಾಡ್ಯವನ ಮಹಿಮೆಯ-
ನೆಲ್ಲ ತಿಳಿಹಿಸಿಕೊಂಡೆವೋ
ಚೆಲ್ಲಗಂಗಳ ಚಪಲೆಯರು ಮಧುರೆ ನಾರಿಯರ
ಒಲಪಿ[1]ಗೆ ನಾವೆದುರೇನೋ ೧

ಚೊಕ್ಕನಾದ ನಿತ್ಯ ತೃಪ್ತನಿಗೆ ಬೆಣ್ಣೆಕಳ-
ವಿಕ್ಕಿದೆವಲ್ಲವೋ
ಸಿಕ್ಕಿಸಿಕೊಂಡು ರಾಸಕ್ರೀಡೆ[2]ಯೊಳವಗೆ
ಸೊಕ್ಕಿನುಕ್ತಿಯ ನುಡಿದೆವೊ
ಕಕ್ಕುಲಾತಿ[3]ಲಿ ಕಾಮಾಸಕ್ತರಿಗಿವ ನಮಗೆ
ದಕ್ಕಿದನು ಎಂತಿದ್ದೆವೋ
ವಕ್ರಗತಿಯಾಗಿ ಅಕ್ರೂರ ಬಂದ್ಯೆಮ್ಮ
ಚಕ್ರಧರನಗಲಿಸಿದನೋ ೨

---

1 ಒಯ್ಯಾರ, ಬೆಡಗು. 2 ನರ್ತನ 3 [illegible]

ಧೀರ ಸ್ವರಮಣ[1] ದೋಷದೂರನ್ನ ಅಲ್ಪ ಬಹು
ಜಾರನೆಂದರಿತೆವಲ್ಲೋ
ಆರಾರ ಮನಕಿನ್ನು ತೋರದವನ ನಮ್ಮ
ಓರಗೆ[2]ಯವನೆಂದರಿದೆವೋ
ಮುರಾರಿ[3] ಅಜ[4] ಪರಿವಾರದೊಡೆಯನ ನಾವು
ಪೋರ[5]ನೆಂದಾಡಿಸಿದೆವೋ
ನಾರಿಯರು ನಾವಲ್ಪ ದಾರಿದ್ರ್ಯದಪ್ಪುರಿ[6]ಗೆ
ಶ್ರೀರಮಣನೆಂತೊಡಗುವನೋ ೩

ನಿಧಿಯು ಬದಿ[7]ಲಿದ್ದರೂ ವಿಧಿಸುವುದನರಿಯದೆ
ಪೆದಡೆ[8]ಯರಾದೆವೋ
ಮದನನಾಟಕೆ ಮನವಿಕ್ಕಿ ಅವನಿಂದೊಂದು
ತತ್ವ ತಿಳಿಯಲಿಲ್ಲೋ
ಚದುರೆಯರು ನಮ್ಮ ಬಿಟ್ಟು ಕದಲನಿವನೆಂತೆಂಬ
ಮದದಿ ಮೋಸಹೋದೆವೋ
ಮಧುರೆಯೊಳಿದೆಮ್ಮ ತಮ್ಮ ಹೃದಯದೊಳಿಪ್ಪೆನೆಂದು
ಚದುರ ಪೇಳಿಹನಂತೆಲೋ ೪

ಮತಿ ತಪ್ಪಿದೆವೊ ನಾವು ಸತಿಯರೆಲ್ಲೊಂದಾಗಿ
ರಥವ ನಿಲಿಸದೆ ಹೋದೆವೋ
ಹಿತರಾರು ನಮಗೆ ಸಾರಥಿ ನಿನ್ನ ಸಹಾಯ
ದೊರೆತರೆತನವ[9] ಮಾಳ್ಪೆವೋ

---

1 ತನಗೆ ತಾನೇ ಸಂತೋಷಿಸುವುದು 2 ಒಡನಾಡಿ 3 ಮುರನ ಸಂಹಾರಿ 4 ಬ್ರಹ್ಮ 5 ಚಿಕ್ಕ ಹುಡುಗ 6 ಕಚ್ಚಲ್ಪಟ್ಟವರು 7 ಪಕ್ಕ 8 ತಿಳಿಗೇಡಿ 9 ಪ್ರಯತ್ನ.

ಪಥ[1]ವ ತೋರಿಸೊ ನಮಗೆ ಮುಂದೆಮ್ಮ ಚೆಲ್ವ
ಶ್ರೀಪತಿಯು ಬಂದೊದಗುವಂತೆ
ಗತಿ ಯಾರೊ ಅವನ್ಹೊರತು ಗೋಪಾಲ ವಿಠಲ
ಅಚ್ಯುತನ ಮಹಿಮೆ ಕಾಣೆವೋ ೫

೯೬

ತೋರೆಲೆ ಪ್ರಾಣಕಾಂತನ, ಮಾರ ಎನ್ನ ಸಂ
ಹಾರ ಮಾಡಲು ದಂಡುತಂದನೆ ಪ.

ಮಂದಮಾರುತಗಳು ಚಂದ್ರಕಿರಣಗಳು
ಮುಂದಾಗಿ ಬಂದೊದಗಿದುವು ೧

ಅಂತರಂಗದಿ ಮನೋಭ್ರಾಂತಿಬಡಿಸುವ ವ
ಸಂತನೀಗಲೇ ಬಂದಿರುವನು ೨

ಭೃಂಗಗಳೇ ರಣರಂಗದಿ ಕೂಗುವ
ಸಂಗತಿಗೆ ಬೆದರಿದೆನೆ ೩

ಶುಕವೇರಿ ಧನುವಿನೋಳ್ ವಿಕಸಿತಸುಮಬಾಣ[2]
ಮುಖದೊಳು ಗುರಿಯನ್ನೆ ನೋಡುವ ೪

ಆವಾಗಲು ವಾಸುದೇವ ವಿಠಲನ ಪಾ
ದಾವೆ ಗತಿಯೆಂದಿರುವೆನೆ ೫

೯೭

ಬಾರೋ ಬಾರೋ ಬಾರೋ ಹರಿ
ತೋರೋ ತೋರೋ ಮುಖವ ದೊರಿ ಪ.

---

1 ದಾರಿ  2 ಮನ್ಮಥ

ಧೀರನೆ ಬಹು ಗಂಭೀರನೆ ಗೋರಸ[1]
ಚೋರನೆ ಗೋಪೀಜಾರನೆ ಬ್ಯಾಗನೆ
ವೀರಾಧಿವೀರನೆ ಎನ್ನ ವಾರೆನೋಟ ನೋಡುವರೆ
ಗಾರು[2]ಮಾಡದಲೆ ಮನ ಸೇರಿ ಸುಖಬಡಿಸಲು ಅ.ಪ.

ಭೃಂಗಗಳ್ಯಾತಕೆ ಕೂಗಿದುವೊ ಅಂಗಜ ಶರಗಳು ಸೇರಿದುವೊ
ರಂಗನೆ, ಗರುಡ ತುರಂಗನೆ, ವಿಧೃತ[3]ರಥಾಂಗ[4]ನೆ ಸಜ್ಜನ
ಸಂಗನೆ ಬ್ಯಾಗನೆ
ಮಂಗಳ ರೂಪನೆ ಬೆಳುದಿಂಗಳೊಳು ನೀನು ಪಿ
ಳ್ಳಂಗೊಳವಿ[5] ಊದಲು [ಅನಂಗ ಎನ್ನ ಪೀಡಿಸಿದ] ೧

ಕಾವರೆ ನಿನ್ನ ಹೊರತಿನ್ನಾರೋ
ಭಾವಜ ಪಿತ ಮಂದಿರ ಸೇರೋ
ದೇವನೆ ಭಕುತರ ಕಾವನೆ ವರಗಳ
ನೀವನೆ ರಿಪುವನದಾವನ[6] ಬ್ಯಾಗನೆ
ದೇವಾದಿದೇವನೆ ಎನ್ನ
ಕಾವನು ನೀನಲ್ಲದೆ ಇ
ನ್ನ್ಯಾವನು ಈ ಭೂಮಿಯೊಳ
ಗೀವನ ಕಾಣೆನೊ ನಾನೊಬ್ಬ ೨

ಈ ಸಮಯದಿ ಪರಿಪಾಲಿಪರ್ಯಾರೋ
ವಾಸುದೇವ ವಿಠಲ ನೀ ತೋರೋ
ಶ್ರೀಶನೆ ಸುಂದರ ಹಾಸನೆ[7]ಮುನಿ ಮನ
ವಾಸನೆ ಶತರವಿ ಭಾಸನೆ[8] ಬ್ಯಾಗನೆ
ಹಾಸು ಮಂಚದೊಳು ಹುವ್ವಿನ
ಹಾಸುಗೆಯೊಳು ಮಲಗಿ

1 ಹಾಲು  2 ನೋವು, ಗಾಸಿ  3 ಹಿಡಿದ  4 ಚಕ್ರ  5 ಕೊಳಲು
6 ಕಾಡುಗಿಚ್ಚು  7 ನಗೆ  8 ಪ್ರಕಾಶ

ಬ್ಯಾಸರಗೊಂಡೆನು ಹರಿ
ಹಾಸವ ಮಾಡದೇ ಬ್ಯಾಗ ೩

೯೮

ತಾರಮ್ಮ ಶ್ರೀರಂಗಧಾಮನ, ತಂದು ತೋರಮ್ಮ ಎನ್ನಯ
ಪ್ರೇಮನ
ವಾರಿಜಾಸನ[1] ಸನಕಾದಿ ವಂದಿತ ಪಾದ ತೋರಿದ ಮಹಿಮ
ಧೀರ ಉದ್ಧಾರನ ಪ.

ವೃಂದಾವನದೊಳಾಡುವ ಶ್ರೀಗಂಧವ ಮೈಯೊಳು ತೀಡುವ
ಚೆಂದದಿಂ ಕೊಳಲನೂದುವ ನಮ್ಮ ಕಂದ ಜಲಕ್ರೀಡೆಯಾಡುವ
ನಂದನಂದನ ಗೋವಿಂದನ ಕಾಣದೆ
ಒಂದು ನಿಮಿಷ ಯುಗವಾಗಿ ತೋರುತಲಿದೆ ೧

ಉಡುವ ಸೀರೆ ಸೆಳೆದೋಡುವ ದೊಡ್ಡ ಕಡಹದ ಮರವ
ತಾನೇರುವ
ಕೊಡಲೊಲ್ಲದೆ ಬಹು ಕಾಡುವ, ಲಜ್ಜೆಗೆಡಿಸಿ ಮಾನಿನಿಯರ
ಕೂಡುವ
ತಡವ್ಯಾತಕೆ ಸಖಿ ತವಕದಿಂದಲಿ ಪೋಗಿ
ಒಡೆಯನ ಕರೆತಾರೆ ಅಡಿಗೆರಗುವೆನಮ್ಮ ೨

ನೀಲವರ್ಣ ನಿಜರೂಪನ ಶ್ರೀಲೋಲ ಹೆಳವನಕಟ್ಟೆವಾಸನ
ಜಾಲಿಹಾಳು ರಂಗೇಶನ ಮೂರುಲೋಕದೊಡೆಯ ಪಾಲಿಸೆನ್ನನು
ಆಲಸ್ಯವ್ಯಾತಕೆ ಎನಯನ ಕರೆತಾರೆ
ಜಾಣೆ ನಿನಗೆ ಕಂಠಮಾಲೆ ಹಾಕುವೆನಮ್ಮ ೩

---

1 ಬ್ರಹ್ಮ

## ವಾತ್ಸಲ್ಯ ಭಾವ

೯೯

ಎಲ್ಯಾಡಿ ಬಂದ್ಯೋ ಎನ್ನ ರಂಗಯ್ಯ–ನೀ
ಎಲ್ಯಾಡಿ ಬಂದ್ಯೋ ಎನ್ನ ಕಣ್ಣಮುಂದಾಡದೆ ಪ.

ಆಲಯ[1]ದೊಳಗೆ ನೀನಾಡದೆ–ಚಿನಿ
ಪಾಲು[2]ಸಕ್ಕರೆ ನೀನೊಲ್ಲದೆ–ಚಿಕ್ಕ
ಬಾಲೆಯರೊಡನೆ ಕೂಡ್ಯಾಡದೆ–ಮುದ್ದು
ಬಾಲಯ್ಯ ನೀ ಎನ್ನ ಕಣ್ಣ ಮುಂದಾಡದೆ ೧

ಬಟ್ಟಮುತ್ತಿ[3]ನ ಬೊಗಸೆ ಕಂಗಳು–ಫಣೆ[4]ಯೊ
ಳಿಟ್ಟ ಕಸ್ತೂರಿ ತಿಲಕದಂದವು–ಅಲ್ಲಿ
ದಿಟ್ಟತನದಿ ಕೂಡ್ಯಾಡಲು
ಪುಟ್ಟ ಕೃಷ್ಣಯ್ಯ ನೀಎನ್ನ ಕಣ್ಣ ಮುಂದಾಡದೆ ೨

ಅಷ್ಟ ದಿಕ್ಕಿಲಿ ಅರಸಿ[5] ಕಾಣದೆ–ಬಹಳ
ದೃಷ್ಟಿಗೆಟ್ಟೆನು ನಿನ್ನ ನೋಡದೆ–ಇ
ನ್ನೆಷ್ಟು ಹೇಳಲಿ ಕೇಳಬಾರದೆ–ರಂಗ
ವಿಠಲ ನೀ ಎನ್ನ ಕಣ್ಣ ಮುಂದಾಡದೆ ೩

---

1 ಮನೆ 2 ಕೆನೆಹಾಲು 3 ಗುಂಡಾಗಿರುವ ಮುತ್ತು 4 ಹಣೆ
5 ಹುಡುಕಿ

೧೦೦

ಪೋಪು ಹೋಗೋಣ ಬಾರೊ ರಂಗ
ಪೋಪು ಹೋಗೋಣ ಬಾರೋ ಪ.

ಜಾಹ್ನವಿ[1]ಯ ತೀರವಂತೆ
ಜನಕರಾಯನ ಕುವರಿಯಂತೆ
ಜಾನಕಿಯು ವಿವಾಹದಂತೆ
ಜಾಣ ನೀ ಬರಬೇಕಂತೆ ೧

ಕುಂಡಿನೀಯ ನಗರವಂತೆ
ಭೀಷ್ಮಕನ ಕುವರಿಯಂತೆ
ಶಿಶುಪಾಲನ ಒಲ್ಲಳಂತೆ
ನಿನಗೆ ವಾಲೆ[2] ಬರೆದಳಂತೆ ೨

ಪಾಂಡವರು ಕೌರವರಿಗೆ
ಲೆತ್ತ[3]ವಾಡಿ ಸೋತರಂತೆ
ರಾಜ್ಯವನ್ನು ಬಿಡಬೇಕಂತೆ
ರಂಗವಿಠಲ ಬರಬೇಕಂತೆ ೩.

೧೦೧

ಕಡೆಗೋಲ ತಾರೆನ್ನ ಚಿನ್ನವೆ–ಮೊಸ
ರೊಡೆದರೆ ಬೆಣ್ಣೆ ಬಾರದು ಮುದ್ದು ರಂಗ ಪ.

ಅಣ್ಣನ ಒಡಗೊಂಡು ಬಾರಯ್ಯ–ಸವಿ
ಬೆಣ್ಣೆಯ ಮುದ್ದೆಯ ಮೆಲುವಿರಂತೆ
ಬಣ್ಣದ ಸರವನ್ನು ಕೊರಳಲ್ಲಿ ಹಾಕುವೆ
ಚಿಣ್ಣರೊ[4]ಡನೆ ಆಡ ಕಳಹುವೆ ರಂಗ ೧

1 ಗಂಗಾನದಿ 2 ಕಾಗದ 3 ಪಗಡೆ 4 ಚಿಕ್ಕವರು

ಪುಟ್ಟ ಬಚ್ಚಿ[1]ಯ ತಂದು ನಿನ್ನಯ ಚಿನ್ನದ
ತೊಟ್ಟಿಲ ಕಾಲಿಗೆ ಕಟ್ಟಿಸುವೆ
ಬಟ್ಟಲು ತುಂಬಿದ ಸಕ್ಕರೆ ನಿನಗೀವೆ
ಕಟ್ಟಾಣಿ[2] ಮುತ್ತಿನ ಸರವನೀವೆ ೨

ಬಡವರ ಭಾಗ್ಯದ ನಿಧಿಯೆ, ಗೋಕುಲ
ದೊಡೆಯನೆ ಮಾಣಿಕ್ಯದ ಹರಳೆ
ಕಡುಮುದ್ದು ಉಡುಪಿನ ಬಾಲಕೃಷ್ಣಯ್ಯ
ದುಡುಕು ಮಾಡುವರೇನೋ ಪೆಂಗಳೊಳು ರಂಗ ೩

೧೦೨

## ಉಗಾಭೋಗ

ಕಡಹದ ಮರನೇರಿ ಕಡುವಿಷದ ಕಾಳಿಂಗನ
ಮಡುವಿನ ನಡುವೆ ಧುಮುಕಿ ಸಡಗರದಲಾಡುತಿರಲು
ಘುಡುಘುಡಿಸುತ ಸರ್ಪ ಬಂದು ನಿನ್ನೊಡಲ ತನ್ನ
ನಡುವೆ ಭಾಗದಿ ಕಟ್ಟಿ ಅಡಗಿಸಿಕೊಳ್ಳುತಿರೆ
ಮೃಡಮುಖ್ಯ ಸುರರೊಡೆಯ ಪೊಡವಿ ನಡುನಡುಗೆ
ತಡೆಯದೆ ಬಿಡಿಸಿ ಪೆಡೆಯ ಹತ್ತಿ ಮೆಟ್ಟಿಗಾಲಲಿ ಮೇಲ್ವೈದಿ
ಕ್ರೀಡಿಸಿ ಅವನ ಮಡದಿಯರ ನುಡಿಗೆ ಮೆಚ್ಚಿ ಕೃಪೆಮಾಡಿದಯ್ಯ
ಗಡಾ ಅಯ್ಯ ಸುರರಯ್ಯ ದಮ್ಮಯ್ಯ ಕೃಷ್ಣಯ್ಯ
ಪಿಡಿಯಯ್ಯ ಬ್ಯಾಗ ಕಯ್ಯ ಅಡಿಗಡಿಗೆ
ಮಾಡಿದಘ[3]ವ ಬಿಡಿಸಯ್ಯ ಜಡಮತಿ ಮರುಳನೋ ನಾನು
ಕಡು ಕೃಪೆ ಮಾಡು ಹಯವದನ

1 ಮರಿ 2 ಶ್ರೇಷ್ಠ 3 ಪಾಪ

೧೦೩

ಕುಣಿದಾಡೊ ರಂಗ ನಲಿದಾಡೊ ಪ.

ಕುಣಿದಾಡೊ ಕುಂದಣ[1]ದ ಸರಳೆ
ನಲಿದಾಡೊ ಮಾಣಿಕ[2]ದ ಹರಳೆ ಅ.ಪ.

ಪತಿಶಾಪದಿ ಶಿಲೆಯಹಾದ ಗೌತಮ
ಸತಿಯು ಮೆಟ್ಟಿ ಪೆಣ್ಣವಾಡಿ
ಅತಿದಿವ್ಯ ಶ್ರೀಚರಣಾರವಿಂದ
ಗತಿಯಿಂದಲಿ ಧಿಂಧಿಮಿಕೆನ್ನುತ ೧

ಗಕ್ಕಸದಿಂ ಶಕಟಾಸುರನ
ಸೊಕ್ಕಮುರಿದು ಬಂಡಿಯನೊದೆದು
ಚೊಕ್ಕ ಶ್ರೀಚರಣಾರವಿಂದ
ಧಿಕ್ಕಿಟ ಧಿಮಿಕಿಟ ಝುಂಕಿಟವೆನ್ನುತ ೨

ಬಲಿಯು ಮೆಟ್ಟಿ ಕಾಳಿಂಗನ ಪಡೆಯು
ತುಳಿದು ನಾಟ್ಯವನಾಡಿ
ಚೆಲುವ ಶ್ರೀಹಯವದನ ನಿಮ್ಮ
ಘಲಿ ಘಲಿ ಗೆಜ್ಜೆ ಘಲು ಘಲುಕೆನ್ನುತ ೩

೧೦೪

ಎನ್ನಾಣೆ ಬ್ಯಾಡ ಬ್ಯಾಡವೊ ರಂಗ, ನಿನಗಿದು
ಚೆನ್ನದಿತ್ತೇ[3]ರ ಮನೆ ಗೋವಿಂದ ಪ.

1 ಚೊಕ್ಕ ಚಿನ್ನ, ಅಪರಂಜಿ. 2 ಮಾಣಿಕ್ಯ, ಕೆಂಪು. 3 ಚೆಲುವೆಯರು

ಗೋಪೇರ ಮನೆಗಳ ಪೊಕ್ಕು ಬಹುಪರಿ
ತಾಪವ ಮಾಡುವರೇ ಕಂದ ಗೋವಿಂದ,
ಕಾಪಟ್ಯ[1]ಸತಿಯರ ಮಾತ ನೀ ಲಾಲಿಸಿ
ಕೋಪಿಸಬೇಡವಮ್ಮ ಗೋಪೆಮ್ಮ ೧

ಎನ್ನಪ್ಪ ಕಂದನೆ ಚಿಣ್ಣ ಗೋಪೇರು ಬಂದು
ನಿನ್ನ ದೂರುತಲೈದಾರೋ ಗೋವಿಂದ.
ಕನ್ನೀರು ಕೊಬ್ಬಿಂದ ಅನ್ಯಾಯ ನುಡಿತಾರೆ
ಇನ್ನೇನು ಮಾಡಲಮ್ಮ ಗೋಪೆಮ್ಮ ೨

ದಧಿ[2] ದುಗ್ಧ[3] ಭಾಂಡ[4] ಗೋಪಿಯರನ್ನು
ಸದರ ಮಾಡುವರೇ ಕಂದ ಗೋವಿಂದ,
ಉದಯದಿ ಗುಂದ್ಯಾಡಿ ಮಾರ್ಜಾಲಂ[5]ಗಳು ಬೀಳೆ
ದಧಿ ಭಾಂಡ ಜಾರಿತಮ್ಮ ಗೋಪೆಮ್ಮ ೩

ಬಸವನ ಆಟದಿ ಶಿಶುಗಳೆಲ್ಲರ ಕೂಡಿ
ಮಸಿಮಣ್ಣು ಮೈಯಾದವೋ ಗೋವಿಂದ
ಬಿಸಜಾಕ್ಷಿಯರು ತಮ್ಮ ಮನೆ ಕೆಲಸದ ಕೈಯ
ಮಸಿಮಣ್ಣು ಒರೆಸಿದರೆ ಗೋಪೆಮ್ಮ ೪

ಒರಗಿದ್ದ ಹಸುಗಳೆಬ್ಬಿಸಿ ಕರುಗಳ ಬಿಟ್ಟು
ದುರುಳತನವ ಮಾಡೋರೆ ಗೋವಿಂದ,
ನೆರೆದಿದ್ದ ಶಿಶುಗಳಾಡುವ ಗುಲ್ಲ ತಾವ್ ಕೇಳಿ
ತುರು ಶಿಶು ಬೆದರಿತಮ್ಮ ಗೋಪೆಮ್ಮ ೫

---

1 ಮೋಸ   2 ಮೊಸರು   3 ಹಾಲು   4 ಪಾತ್ರೆ   5 ಬೆಕ್ಕು

ಅಣ್ಣ ಬಲರಾಮ ನಿನ್ನ ಬನ್ನಣೆ[1] ಸುದ್ದಿಯ
ಚೆನ್ನಾಗಿ ಪೇಳಿದನೊ ಗೋವಿಂದ
ಉನ್ನಂತ ದಾಯಾದಿಯ ಮಾತುಗಳ ನೀನು
ಮನ್ನಿಸಬೇಡವಮ್ಮ ಗೋಪೆಮ್ಮ ೬

ಬಾಯೆನ್ನ ರನ್ನವೆ ಬಾಯೆನ್ನ ಚಿನ್ನವೆ
ಬಾಯೆನ್ನ ಮೋಹದ ಗಿಣಿಯೆ ಗೋವಿಂದ
ಬಾಯೆಂದು ಯಶೋದೆ ಕರೆದಳು ಬಿಗಿದಪ್ಪಿ
ಬಾಯೆನ್ನ ಹಯವದನ ಗೋವಿಂದ ೭

೧೦೫

ಜಗದೋದ್ಧಾರನ ಆಡಿಸಿದಳೆಶೋದೆ ಪ.
ಜಗದೋದ್ಧಾರನ ಮಗನೆಂದು ತಿಳಿಯುತ
ಸುಗುಣಾಂತರಂಗನ ಆಡಿಸಿದಳೆಶೋದೆ ಅ.ಪ.
ನಿಗಮಕೆ ಸಿಲುಕದ ಅಗಣಿತ ಮಹಿಮನ
ಮಗಂಗಳ ಮಾಣಿಕ್ಯನಾ ಆಡಿಸಿದಳೆಶೋದೆ ೧
ಅಣೋರಣೀಯನ ಮಹತೋಮಹೀಯನ
ಅಪ್ರಮೇಯನ ಆಡಿಸಿದಳೆಶೋದೆ ೨
ಪರಮ ಪುರುಷನ ಪರವಾಸುದೇವನ
ಪುರಂದರ ವಿಠಲನ ಆಡಿಸಿದಳೆಶೋದೆ ೩

೧೦೬

ಬಣ್ಣಿಸಿ[2] ಗೋಪಿ ಹರಸಿದಳು ಪ.
ಎಣ್ಣೆಯಂನೊತ್ತ್ಯುತ ಯದುಕುಲ ತಿಲಕಗೆ ಅ.ಪ.

---

1 ತೊಂದರೆ 2 ವರ್ಣಿಸಿ

ಆಯುಷ್ಯವಂತನಾಗು ಅತಿ ಬಲ್ಲಿದನಾಗು
ಮಾಯದ ಖಳರ[1] ಮರ್ದನ[2]ನಾಗು
ರಾಯರ ಪಾಲಿಸು ರಕ್ಕಸರ ಸೋಲಿಸು
ವಾಯುಸುತಗೆ ನೀನೊಡೆಯನಾಗೆನುತ ೧

ಧೀರನು ನೀನಾಗು ದಯಾಂಬುಧಿಯಾಗು
ಆ ರುಗ್ಮಿಣಿಗೆ ನೀನರಸನಾಗು
ಮಾರನ ಪಿತನಾಗು ಮಧುಸೂದನನಾಗು
ದ್ವಾರಾವತಿಗೆ ನೀ ದೊರೆಯಾಗೆನುತ ೨

ಆನಂದ ನೀನಾಗು ಅಚ್ಯುತ ನೀನಾಗು
ದಾನವಾಂತಕನಾಗು ದಯವಾಗು
ಶ್ರೀನಿವಾಸನಾಗು ಶ್ರೀನಿಧಿ ನೀನಾಗು
ಜ್ಞಾನಿ ಪುರಂದರ ವಿಠಲನಾಗೆನುತ ೩

೧೦೭

ಅಳುವದ್ಯಾತಕೊ ರಂಗ ಅತ್ತರಂಜಿಪ ಗುಮ್ಮ ಪ.

ಪುಟ್ಟಿದೇಳು ದಿವಸದಲಿ ದುಷ್ಟ ಪೂತನಿಯ ಕೊಂದೆ
ಮುಟ್ಟಿ ವಿಷದ ಮೊಲೆಯುಂಡ ಕಾರಣ
ದೃಷ್ಟಿ ತಾಕಿತೆ ನಿನಗೆ ರಂಗಯ್ಯ ೧

ಬಾಲಕತನದಿ ಗೋಪಾಲಕರೊಡಗೂಡ
ಕಾಳಿಂಗ ಮಡುವನು ಕಲಕಿದ ಕಾರಣ
ಕಾಲು ಉಳುಕಿತೆ ನಿನಗೆ ರಂಗಯ್ಯ ೨

1 ದುಷ್ಟರ 2 ಸಂಹಾರಕ

ತುರುವ ಕಾಯಲು ಪೋಗೆ ಭರದಿಂದ್ರ ಮಳೆಗರೆಯೆ
ಬೆರಳಲಿ ಬೆಟ್ಟವನೆತ್ತಿದ ಕಾರಣ
ಬೆರಳು ಉಳುಕಿತೆ ನಿನಗೆ ರಂಗಯ್ಯ ೩

ವಸುದೇವನ ಸುತನಾಗಿ ಅಸುರ[1]ರೆಲ್ಲರ ಮಡುಹಿ
ಹೆಸರಿನ ಮಲ್ಲರ ಮಡುಹಿದ ಕಾರಣ
ಕಿಸುರು[2] ತಾಕಿತೇ ನಿನಗೆ ರಂಗಯ್ಯ ೪

ಶರಣು ವೇಲಾಪುರದ ಚೆಲುವ ಚೆನ್ನಿಗರಾಯ
ಪರಿಪರಿ ವಿಧದಿಂದ ಶರಣರ ಪೊರೆಯುವ
ವರದ ಪುರಂದರವಿಠಲರಾಯ ೫

೧೦೮

ಗುಮ್ಮನ ಕರೆಯದಿರೆ ಅಮ್ಮ ನೀನು ಪ.

ಸುಮ್ಮನೆ ಇದ್ದೇನು ಅಮ್ಮಿ[3]ಯ ಬೇಡೆನು
ಮಮ್ಮು[4] ಉಣ್ಣುತೇನ ಅಮ್ಮ ಅಳುವುದಿಲ್ಲ ಅ.ಪ.

ಹೆಣ್ಣುಗಳಿರುವಲ್ಲಿ ಪೋಗಿ ಅವರ
ಕಣ್ಣು ಮುಚ್ಚುವುದಿಲ್ಲವೆ
ಚಿಣ್ಣರ ಬಡಿಯೆನು ಅಣ್ಣನ ಬಯ್ಯೆನು
ಬೆಣ್ಣೆಯ ಬೇಡೆನು ಮಣ್ಣು ತಿನ್ನುವುದಿಲ್ಲ ೧

ಬಾವಿಗೆ ಪೋಗೆ ಕಾಣೆ, ಅಮ್ಮ ನಾನು
ಹಾವಿನೊಳಾಡೆ ಕಾಣೆ
ಆವಿ[5]ನ ಮೊಲೆಯೂಡೆ[6] ಕರುಗಳ ಬಿಡೆ ನೋಡೆ
ದೇವರಂತೆ ಒಂದು ಠಾವಿ[7]ಲಿ ಕೂಡುವೆ ೨

1 ರಾಕ್ಷಸ 2 ದೃಷ್ಟಿ, ಕಣ್ಣಿನ ನಂಜು. 3 ಮೊಲೆ 4 ಅನ್ನ
5 ಹಸು 6 ಉಣ್ಣಿಸು 7 ಸ್ಥಳ

ಮಗನ ಮಾತ ಕೇಳಿ ಗೋಪೀದೇವಿ
ಮುಗುಳು ನಗೆಯು ನಗುತ
ಜಗದೊಡೆಯನ ಶ್ರೀಪುರಂದರವಿಠಲನ
ಬಿಗಿದಪ್ಪಿಕೊಂಡಳು ಮೋಹದಿಂದಲಾಗ ೩

೧೮೯

ಪೋಗದಿರೆಲೊ ರಂಗ, ಬಾಗಿಲಿಂದಾಚೆಗೆ ಪ.

ಭಾಗವತರು ಕಂಡರೆತ್ತಿಕೊಂಡುಯ್ವರೋ ಅ.ಪ.

ಸುರಮುನಿಗಳು ತಮ್ಮ ಹೃದಯಗಹ್ವರ[1]ದಲ್ಲಿ
ಪರಮಾತ್ಮನ ಕಾಣದರಸುವರೋ
ದೊರಕದ ವಸ್ತುವಿಂದು ದೊರಕಿತು ತಮಗೆಂದು
ಹರುಷದಿಂದ ನಿನ್ನ ಕರೆದೆತ್ತಿಕೊಂಬರು ೧

ಅಗಣಿತ[2]ಗುಣ ನಿನ್ನ ಜಗದ ನಾರಿಯರೆಲ್ಲ
ಹಗೆಯಾಗಿ ನುಡಿವರೋ ಗೋಪಾಲನೇ
ಮಗುಗಳ ಮಾಣಿಕ್ಯ ತಗುಲಿತು ಕರ[3]ಕೆಂದು
ಬೇಗದಿಂದ ಬಂದು ಬಿಗಿದಪ್ಪಿಕೊಂಬರು ೨

ದಿಟ್ಟ ನಾರಿಯರೆಲ್ಲ ಇಷ್ಟವ ಸಲಿಸೆಂದು
ಅಟ್ಟಟ್ಟಿ ಬೆನ್ಹಿಂದೆ ತಿರುಗುವರೋ
ಸೃಷ್ಟೀಶ ಪುರಂದರವಿಠಲರಾಯನೆ
ಇಷ್ಟಿಷ್ಟು ಬೆಣ್ಣೆಯ ಕೊಟ್ಟೆನೊ ರಂಗಯ್ಯ ೩

---

1 ಗವಿ, ಗುಹೆ. 2 ಲೆಕ್ಕವಿಲ್ಲದಷ್ಟು 3 ಕೈ

೧೧೦

ಆಡ ಹೋದಲ್ಲೆ ಮಕ್ಕಳು ಆಡಿಕೊಂಬುವರು ನೋಡಮ್ಮ
ಪ.

ನೋಡಿ ನೋಡಿ ಎನ್ನ ಮುಖವ ನೋಡಿ ಕಣ್ಣು
ಮಿಟುಕಿಸುವರಮ್ಮ ಅ.ಪ.

ದೇವಕಿ ಹೆತ್ತಳಂತೆ ವಸುದೇವನೆಂಬುವ ಪಿತನಂತೆ
ಕಾವಲಲ್ಲಿ ಹುಟ್ಟಿದೆನಂತೆ ಮಾವಗಂಜಿಲ್ಲಿ ತಂದರಂತೆ ೧

ವಿಷವು ತುಂಬಿದ ಮೊಲೆಯನುಂಡು ಅಸುರೆ[1]ಯ ನಾ
ಕೊಂದೆನಂತೆ
ನಿಶಿಚರ[2] ಶಕಟಾಸುರನ ಶಿಶುಗಾಲಿಲೊರಸಿದೆನಂತೆ ೨

ನೀನೆನ್ನ ಹಡೆದಿಲ್ಲವಂತೆ ನಾ ನಿನ್ನ ಮಗನಲ್ಲವಂತೆ
ಧೇನು[3] ಕಾಯುವರಿಲ್ಲವೆಂದು ಸಾನುರಾಗ[4]ದಿ ಸಲಹಿದೆ
ಯಂತೆ ೩

ಕಿಚ್ಚ ನಾ ಗಡ ನುಂಗಿದೆನಂತೆ ವತ್ಸಾಸುರನ ಕೆಡಹಿದೆನಂತೆ
ಕಚ್ಚ ಬಂದ ಕಾಳಿಂಗನ ಕೊಚ್ಚಲು[5] ಮಡುವ ಧುಮುಕಿದೆ
ನಂತೆ ೪

ಹದ್ದು ಎನ್ನ ವಾಹನವಂತೆ ಹಾವು ಎನ್ನ ಹಾಸಿಗೆಯಂತೆ
ಕದ್ದು ಬೆಣ್ಣೆಯ ನಾ ತಿಂದೆನಂತೆ ಮುದ್ದು ಪುರಂದರ
ವಿಠಲನಂತೆ ೫

೧೧೧

ಹರಿಕುಣಿದ ನಮ್ಮ ಹರಿ ಕುಣಿದ ಪ.

ಅಕಳಂಕ[6]ಚರಿತ ಮಕರಕುಂಡಲಧರ
ಸಕಲರ ಪಾಲಿಪ ಹರಿ ಕುಣಿದ ೧

ಅರಳೆಲೆ ಮಾಗಾಯಿ ಕೊರಳ ಮುತ್ತಿನ
ಸರ ಸಕಲರ ಪಾಲಿಪ ಹರಿ ಕುಣಿದ ೨

---

1 ರಾಕ್ಷಸಿ 2 ರಾಕ್ಷಸ 3 ಹಸು 4 ಪ್ರೀತಿ 5 ತುಂಡುಮಾಡು
6 ದೋಷವಿಲ್ಲದ

ಅಂದುಗೆ[1] ಪಾಡಗ[2] ಬಿಂದಲಿ[3] ಬಾಪುರಿ[4]
ಚೆಂದದಿ ನಲಿವುತ್ತ ಹರಿ ಕುಣಿದ ೩

ಉಟ್ಟ ಪಟ್ಟೆ[5] ದಟ್ಟಿ ಇಟ್ಟ ಕಾಂಚಿದಾಮ[6]
ದಿಟ್ಟಮಲ್ಲರ ಗಂಡ ಹರಿ ಕುಣಿದ ೪

ಪರಮ ಭಾಗವತರ ಪುರದೊಳಾಡುವ
ಪುರಂದರ ವಿಠಲ ಹರಿ ಕುಣಿದ ೫

೧೧೨

ಅಮ್ಮಾ ನಿಮ್ಮ ಮನೆಗಳಲ್ಲಿ ನಮ್ಮ ರಂಗನ ಕಾಣಿರೇನೆ ಪ.

ಕಾಶಿ ಪೀತಾಂಬರ[7] ಕೈಯಲ್ಲಿ ಕೊಳಲು
ಪೂಸಿದ ಶ್ರೀಗಂಧ ಮೈಯೊಳಗಮ್ಮ
ಲೇಸಾಗಿ[8] ತುಲಸಿಯ ಮಾಲೆಯ ಹಾಕಿದ
ವಾಸುದೇವನು ಬಂದ ಕಾಣಿರೇನೆ ೧

ಕರದಲ್ಲಿ ಕಂಕಣ[9] ಬೆರಳಲ್ಲಿ ಉಂಗುರ
ಕೊರಳಲ್ಲಿ ಹಾಕಿದ ಹುಲಿಯುಗುರಮ್ಮ
ಅರಳೆಲೆ ಕನಕ ಕುಂಡಲ ಕಾಲಲಂದುಗೆ
ಉರಗಶಯನ ಬಂದ ಕಾಣಿರೇನೆ ೨

ಕಾಲಲಿ ಕಿರುಗೆಜ್ಜೆ ನೀಲದ ಬಾವುಲಿ[10]
ನೀಲವರ್ಣನು ನಾಟ್ಯವಾಡುತಲಿ
ಮೇಲಾಗಿ ಬಾಯಲ್ಲಿ ಜಗವನ್ನು ತೋರಿದ
ಮೂಲೋಕದೊಡೆಯನ ಕಾಣಿರೇನೆ ೩

---

1 ಕಾಲಿನಗೆಜ್ಜೆ 2 ಕಾಲಬಳೆ 3 ಮುಂಗೈ ಕಡಗ 4 ತೋಳ ಒಡವೆ
5 ಮಡಿ (?) 6 ಚಿನ್ನದ ಉಡಿದಾರ 7 ಹಳದಿ ರೇಷ್ಮೆಯ ಬಟ್ಟೆ 8 ಚೆನ್ನಾಗಿ
9 ಬಳೆ 10 ಕಿವಿಯ ಒಡವೆ.

ಕುಂಕುಮ ಕಸ್ತೂರಿ ಕುಡಿಕುಡಿ[1] ನಾಮವು
ಶಂಖ ಚಕ್ರಂಗಳ ಧರಿಸಿಹನಮ್ಮ
ಬಿಂಕದಿಂದಲಿ ಕೊಳಲೂದುತ್ತ ಪಾಡುತ್ತ
ಪಂಕಜಾಕ್ಷನು ಬಂದ ಕಾಣಿರೇನೆ ೪

ಹದಿನಾರು ಸಾವಿರ ಗೋಪಿಯರ ಒಡಗೂಡಿ
ಚದುರಂಗ ಪಗಡೆಯನಾಡುವನಮ್ಮ
ಮದನ ಮೋಹನ ರೂಪ ಎದೆಯಲ್ಲಿ ಕೌಸ್ತುಭ
ಪದಮನಾಭನು ಬಂದ ಕಾಣಿರೇನೆ ೫

ನೊಸಲ[2] ಸುತ್ತಿದ ಪಟ್ಟಿ ನಡುವಿನ ಒಡ್ಯಾಣ
ಎಸೆವ ಕಸ್ತೂರಿ ಬಟ್ಟು[3] ಮೈಯವನಮ್ಮ
ಪಸರಿಸಿ ಪಟ್ಟೆಯ ಹಾವಿಗೆ[4] ಮೆಟ್ಟಿದ
ಅಸುರಾಂತಕ ಬಂದ ಕಾಣಿರೇನೆ ೬

ತೆತ್ತೀಸ[5]ಕೋಟಿ ದೇವರ್ಕಳ ಒಡಗೂಡಿ
ಹತ್ತವತಾರವನೆತ್ತಿದನೆ
ಭಕ್ತವತ್ಸಲ ನಮ್ಮ ಪುರಂದರ ವಿಠಲ
ನಿತ್ಯೋತ್ಸವ ಬಂದ ಕಾಣಿರೇನೆ ೭

೧೧೩

ಯಾದವ ನೀ ಬಾ ಯದುಕುಲ ನಂದನ
ಮಾಧವ ಮಧುಸೂದನ ಪ.

ಸೋದರಮಾವನ ಮಧುರೆಲಿ ಮಡುಹಿದ[6]-ಯ
ಶೋದೆನಂದನ ನೀ ಬಾರೋ ಅ.ಪ.

---

1 ಎಳೆಯ, ತೆಳುವಾದ. 2 ಹಣೆ 3 ತುಂಬಿದ 4 ಪಾದುಕೆ 5 ಮೂವತ್ತಮೂರು 6 ಸಾಯಿಸು.

ಕಣಕಾಲಂದುಗೆ ಘಲುಘಲುರೆನುತಲಿ
ಝುಣ ಝುಣ ವೇಣುನಾದದಲಿ
ಚಿಣಿಕೋಲ್ ಚೆಂಡು ಬುಗುರಿಯನಾಡುತ
ಸಣ್ಣ ಸಣ್ಣ ಗೋವಳರೊಡಗೂಡಿ ೧

ಶಂಖ ಚಕ್ರವು ಕೈಯಲಿ ಹೊಳೆಯುತ
ಬಿಂಕ[1]ದ ಗೋವಳ ನೀ ಬಾರೋ, ಅಕ
ಳಂಕ ಚರಿತನೆ ಆದಿನಾರಾಯಣ
ಬೇಕೆಂಬ ಭಕ್ತರಿಗೊಲಿದು ಬಾರೊ ೨

ಖಗವಾಹನನೆ ಬಗೆಬಗೆಯಿಂದಲಿ
ನಗೆಮೊಗದರಸನೆ ನೀ ಬಾರೊ
ಜಗದೊಳು ನಿನ್ನಯ ಮಹಿಮೆಯ ಪೊಗಳುವೆ
ಪುರಂದರವಿಠಲ ನೀ ಬಾರೊ ೩

೧೧೪

ಗೋಪಿಯ ಭಾಗ್ಯವಿದು
ಶ್ರೀಪತಿ ತಾ ಶಿಶುರೂಪಿನಲಿರುವುದು ಪ.

ಕಡು ಮುದ್ದು ರಂಗನ ತೊಡೆಯ ಮೇಲೆತ್ತುತ
ಜಡೆಯ ಹೆಣೆದು ಹೂವಮುಡಿಸಿ ಬೇಗ
ಬಿಡದೆ ಮುತ್ತಿನ ಚೆಂದರಳೆಲೆಯನು
ಸಡಗರದಿಂದಲಂಕರಿಸಿದಳು ೧

---

1 ಹೆಮ್ಮೆ, ಗರ್ವ.

ನಿತ್ಯ ನಿರ್ಮಲನಿಗೆ ನೀರನೆರೆದು ತಂ
ದೆತ್ತಿ ತೊಡೆಯೊಳಿಟ್ಟು ಮೊಲೆಯೂಡಿ
ಮುತ್ತು ಕೊಟ್ಟು ಬಲು ವಿಧದಿಂದಾಡಿಸಿ
ಅರ್ತಿಯಿಂದಲಿ ತಾ ತೂಗಿದಳು ೨

ದೃಷ್ಟಿ ತಾಕೀತೆಂದಿಟ್ಟು ವಿಭೂತಿಯ
ತಟ್ಟೆಯೊಳಾರತಿಗಳ ಬೆಳಗಿ
ತಟ್ಟನೆ ಉಪ್ಪು ಬೇವು ನಿವಾಳಿಸಿ
ತೊಟ್ಟಿಲೊಳಿಟ್ಟು ತಾ ತೂಗಿದಳು ೩

ಎನ್ನಯ್ಯ ರನ್ನನೆ ಸುಮ್ಮನಿರೊ ದೊಡ್ಡ
ಗುಮ್ಮನು ಬರುವನು ಅಳಬೇಡ
ಸುಮ್ಮನೆ ಇರು ನಿನಗಮ್ಮಿ ಕೊಡುವೆನೆಂದು
ಬೊಮ್ಮ[1]ನ ಪಿತನ ತಾ ತೂಗಿದಳು ೪

ಮಾಧವ ಜೋ ಮಧುಸೂದನ ಜೋ ಜೋ
ಯಾದವರಾಯ ಶ್ರೀರಂಗನೆ ಜೋ
ಆದಿಮೂರುತಿ ನಮ್ಮ ಪುರಂದರವಿಠಲನ
ಆದರದಿಂದ ತೂಗಿದಳು ೫

೧೩೫

ಉಗಾಭೋಗ

ಕಾಲ ಮೇಲೆ ಮಲಗಿ ಸಿಂಪಿಲಿ[2] ಹಾಲು ಕುಡಿದು ಬೆಳೆದೆ
ಮೂರು ಲೋಕವು ನಿನ್ನುದರ[3]ಲ್ಲಿರಲು
ಈರೇಳು[4] ಲೋಕವನೀರಡಿ[5] ಮಾಡಲು
ಮೂರು ಲೋಕದೊಡೆಯ ಶ್ರೀಪುರಂದರವಿಠಲ
ನಿನ್ನ ಬಾಲಕತನದ ಲೀಲೆಗೆ ನಮೋ ನಮೋ

---

1 ಬ್ರಹ್ಮ 2 ವಳಲೆ ೩ ಹೊಟ್ಟೆ 4 ಹದಿನಾಲ್ಕು 5 ಎರಡು ಹೆಜ್ಜೆ

೧೧೭

ಆಡಿದನೋ ರಂಗ ಅದ್ಭುತದಿಂದಲಿ
ಕಾಳಿಂಗನ ಫಣೆ[1]ಯಲಿ ಪ.

ಪಾಡಿದವರಿಗೆ ಬೇಡಿದ ವರಗಳ
ನೀಡುತಲಿ ದಯಮಾಡುತಲಿ ನಲಿ
ದಾಡುತಲಿ ಬೆಣ್ಣೆ ಬೇಡುತಲಿ ಕೃಷ್ಣ ಅ.ಪ.

ಅಂಬುರುಹೋ[2]ದ್ಭವ ಅಖಿಳ ಸುರರು ಕೂಡಿ
ಅಂಬರ[3]ದಲಿ ನಿಂತು ಅವರ್‍ಸ್ತುತಿಸೆ
ರಂಭೆ ಊರ್ವಸಿ ರಮಣಿಯರೆಲ್ಲರು
ಚೆಂದದಿಂ ಭರತ ನಾಟ್ಯವ ನಟಿಸೆ
ಝಂ ತಟ ತಕ ಧಿಮಿ ತಧಿತೋ ಎಂದು
ಝಂಪೆ ತಾಳದಿ ತುಂಬುರನೊಪ್ಪಿಸೆ
ಧಾಮಪಪಾಧಸರೀ ಎಂದು ಧ್ವನಿಯಿಂದ
ನಾರದ ತುಂಬುರ್ಗಾನವ ಮಾಡಲು
ನಂದಿಯು ಮದ್ದಳೆ ಚೆಂದದಿ ಹಾಕಲು ೧

ಫಣವ ಮೆಟ್ಟಿ ಬಾಲವ ಕೈಯಲಿ ಪಿಡಿದು
ಫಳಫಳಿಸುತ್ತ ನಾಟ್ಯವನಾಡೆ
ಚಂದ್ರಮಂಡಲದಂತೆ ಪೊಳೆಯುವ ಮುಖದೊಳು

---

1 ಹೆಡೆ 2 ತಾವರೆ 3 ಆಕಾಶ

ಚಲಿಸುವ ನೀಲಕೇಶ[1]ಗಳಾಡೆ
ಕಾಲಲಂದುಗೆ ಗೆಜ್ಜೆ ಘಲು ಘಲು ಘಲುರೆನುತ
ಉಡುಗೆಜ್ಜೆ[2] ಗಂಟೆಗಳಾಡಿ
ದುಷ್ಟ ಕಾಳಿಂಗನ ಮೆಟ್ಟಿ ಭರದಿಂದ
ಪುಟ್ಟ ಪಾದವ ಇಟ್ಟು ಶ್ರೀಕೃಷ್ಣನು
ಮೆಟ್ಟಿದನು ತಕಧಿಮಿ ತಧಿಕೆನುತ ೨

ಸುರರು ಪುಷ್ಪದ ವೃಷ್ಟಿ[3]ಯು ಕರೆಯಲು
ಸುದತಿಯರೆಲ್ಲರು ಪಾಡಲು
ನಾಗಕನ್ನಿಕೆಯರು ನಾಥ[4]ನ ಬೇಡಲು
ನಾನಾ ವಿಧದಿ ಸ್ತುತಿ ಮಾಡಲು
ರಕ್ಕಸರೆಲ್ಲರು ಕಕ್ಕಸ[5]ವನೆ ಕಂಡು
ದಿಕ್ಕು ದಿಕ್ಕುಗಳಿಗೆ ಓಡಲು
ಚಿಕ್ಕವನಿವನಲ್ಲ ಪುರಂದರವಿಠಲ
ವೆಂಕಟರಮಣನ ಬೇಗ ಯಶೋದೆ
ಬಿಂಕದೊಳೆತ್ತಿ ಮುದ್ದಾಡೆ ಶ್ರೀಕೃಷ್ಣನ ೩

೧೧೭

ರಂಗ ಕೊಳಲನೂದಲಾಗಿ
ಮಂಗಳಮಯವಾಯ್ತು ಧರೆ; ಜ–
ಗಂಗಳು ಚೈತನ್ಯ ಮರೆದು
ಅಂಗಪರವಶವಾದುವು ಪ.

---

1 ಕಪ್ಪುಗೂದಲು 2 ನಡುವಿನ ಆಭರಣ 3 ಮಳೆ 4 ಗಂಡ
ಕಾಠಿನ್ಯ

ತೀಡಿದ ಮಾರುತ ಮಂದಗತಿಗೆ
ಬಾಡಿದ ಬರಲು[1] ಫಲಗೊಂಚಲು ಬಿಡೆ
ಪಾಡಲೊಲ್ಲವಳಿ ಕುಲಗಳು
ಬಾಡಿದ ಮಾಮರ ಚಿಗುರೊಡೆಯೆ
ಹೇಡಿಗೊಂಡುವು ಜಾಣ್ವಕ್ಕಿ ಗಿಳಿ, ಮಾ
ತಾಡದೆ ಕಳೆಗುಂದಿದುವು ಕೋಗಿಲೆ
ಓಡ್ಯಾಟ ವೈರವ ಬಿಟ್ಟು ಖಗ ಮೃಗ
ಗಾಢ ನಿದ್ರಾವಶವಾದುವು ೧

ತಳದುದಕ[2] ಉಕ್ಕೇರಿ ಬಂದುವು
ತುಳುಕಿ ಚೆಲ್ಯಾಡಿ ಬಂದಳು ಯಮುನೆ
ಮೇಲೆ ಮೇಲೋಡಿ ಮೇಘಾಳಿ[3] ದಾಳಿಟು ವು
ಕಲ್ಲು ಕರಗಿ ನೀರಾದುವು
ನಳಿನ[4] ಚಂಪಕ[5] ನಾಗ[6] ಪುನ್ನಾಗ[7] ಪಾ
ಟಲ[8] ಸೇವಂತಿಗೆ ಕುಂದ[9]. ಬಕುಳವು
ಮಾಲತಿ ಜಾಜಿ ಪರಿಮಳಗೂಡಿತು
ನೀಲಾಂಗನಂಘ್ರಿಗೆರಗಿದುವು ೨

ಮುದ್ದು ಮೋಹನನ ಮಂಜುಳ ಸಂಗೀತ
ಸದ್ದನಾಲೈಸಿ ಗೋಪಾಂಗನೆಯರೆಲ್ಲ
ಬುದ್ಧಿ ಸೂರ್ಯಾಡಿ ಆನಂದವಾರಿಧಿಯಲ್ಲಿ
ಬಿದ್ದು ಪರವಶರಾದರು

---

1 ಹಂಚಿಕಡ್ಡಿ 2 ನೀರು 3 ಮೋಡಗಳ ಸಮೂಹ 4 ತಾವರೆ 5 ಸಂಪಿಗೆ
6 ಒಂದು ಜಾತಿಯ ಸಂಪಿಗೆ (ನಾಗಸಂಪಿಗೆ) ಸುರಹೊನ್ನೆ 8 ಪಾದರಿ
9 ಮಲ್ಲಿಗೆ

ಸಿದ್ಧ ಮುನಿಜನರಿದ್ದ ಸಮಾಧಿಯೊ
ಳಿದ್ದು ಕುಣಿದಾಡಿದರು ಎದುರೆದುರಾಗಿ
ಗದ್ದುಗೆ[1]ಯರಸನೋಲೈಸಿಕೊಂಡರು
ಗೆದ್ದರು ಭವಸಮುದ್ರ[2]ವ ೩

ಕೆಚ್ಚಲು ಬಿಗಿದು ತೊರೆಯಲು ಮೊಲೆಯು
ವತ್ಸ[3]ಗಳೊಡಲಾಸೆಯು ತೊರೆದೆಳೆಹುಲ್ಲು
ಕಚ್ಚಿರಲಲ್ಲಿ ನಿಂದುವು ಗೋವ್ಗಳು
ಪುಚ್ಛ[4]ವ ನೆಗಹಿ[5] ನೀಂಟಿಸಿ
ಅಚ್ಯುತನಾಕೃತಿ ನೋಡಲು ಸುರರಿಗೆ
ಆಶ್ಚರ್ಯವಾಯಿತು ನಾವು ಕಂಡೆವೆಂದು
ಮೆಚ್ಚಿ ಮುಕುಂದನ ಲೀಲಾವಿನೋದಕೆ
ಹೆಚ್ಚಿನ ಕುಸುಮವ ಸುರಿದರು ೪

ಶ್ರೀಮನೋಹರ ಗೋಪಾಲ ಮೂರುತಿ
ಆ ಮಧುಕುಂಜವನದಿ ತ್ರಿಭಂಗಿಲಿ
ಹೇಮಾಂಬರ[6]ವುಟ್ಟು ಗೀರ್ಗಂಧ ಕಸ್ತೂರಿ
ನಾಮ ಮಕುಟ[7]ದ ಬೆಳಕಿನಲಿ
ಧಾಮ ವನಮಾಲೆ ಬರ್ಹಿ[8]ಭೂಷಿತ
ಸ್ವಾಮಿ ಪುರಂದರವಿಠಲ ರಾಯನು
ನಾಮಕ್ರಿಯ ಮೋಘರಂಜಿನಿ ಪಾಡೆ
ಸಾಮವೇದ ನಮೋ ನಮೋ ಎನ್ನೆ ೫

---

1 ಪೀಠ 2 ಜನ್ಮ ಸಮುದ್ರ 3 ಕರು 4 ಬಾಲ 5 ಎತ್ತಿ 6 ಚಿನ್ನದ ಬಟ್ಟೆ (ಜರತಾರಿ ಬಟ್ಟೆ) 7 ಕಿರೀಟ 8 ನವಿಲುಗರಿ

೧೭೭ಎ

ಕಾದನು ವತ್ಸವ ಹರಿ ಕಾದನು ಪ.

ವೇದವೇದ್ಯ ಸಾಧುವಿನುತ ರಾಧಿಕಾರಮಣ ಕೃಷ್ಣ ಅ.ಪ.

ಎಳೆಯ ಗರಿಕೆ ಇರುವ ಸ್ಥಳದಿ ನೆರೆದೂ ವಸ್ತುಗಳನೆ ನಿಲಿಸಿ
ಕೊಳಲೂ ತನ್ನ ಕೈಲಿ ಪಿಡಿದು ಮುರಲಿಗಾನ ಮಾಡುತ್ತ ೧

ತನ್ನ ಸೆರಗು ತೆಗೆದು ಕೃಷ್ಣ ಕರುಗಳನ್ನೆ ಬೆನ್ನೊರೆಸಿ
ತಿನ್ನು ತಿನ್ನು ಪುಲ್ಲಃಯೆನುತ ಘನ್ನ ಕರಗಳೊತ್ತುತ್ತ ೨

ಉಡು[1]ಗಳಂತೆ ಕರುಗಳು ನಡುವೆ ಚಂದ್ರ ಧರೆಯೊಳು
ಪೊಡವಿಯೊಳಗೆ ಬೆಳಗಲು ಆ ಮೃಡನು ಕೊಂಡಾಡಲು ೩

ಒಂದು ತಿಂಗಳ ಕರುಗಳು ಇಂದಿರೇಶನು ಮೇಯಿಸಲು
ಒಂದು ವರುಷ ಕರುಗಳಂತೆ ಆನಂದದಿಂದ ಬೆಳೆದುವು ೪

ಕನಕ[2] ರಜತ[3] ಸರಪಳಿ ದನ ಕರುಗಳ ಕೊರಳಲಿ
ಮಿನುಗುತಿಪ್ಪ ಅರಳೆಲೆ ಆನೇಕ ನಾದದಿಂದಲಿ ೫

ಅಜ[4]ಗಳಂತ ಕರುಗಳು ಗಜಗಳಂತೆ ಆದುವು
ತ್ರಿಜಗದೊಡೆಯ ವಿಜಯವಿಠಲ ವ್ರಜಕೆ ದೊರೆಯಾಳುವ ೬

೧೭೭ಬಿ

ಲಾಲಿ ಶ್ರೀಹಯವದನ ಲಾಲಿ ರಂಗವಿಠಲ
ಲಾಲಿ ಗೋಪಿನಾಥ ಲಕ್ಷ್ಮೀಸಮೇತ ಪ.

---

1 ನಕ್ಷತ್ರ 2 ಚಿನ್ನ 3 ಬೆಳ್ಳಿ 4 ಮೇಕೆ

ಮುತ್ತು ಮಾಣಿಕ ಬಿಗಿದ ತೊಟ್ಟಿಲೊಳಗೊಲ್ಲ
ಎತ್ತಿದರು ಎನ್ನಯ್ಯ ಕಯ್ಯೊಳಗೆ ನಿಲ್ಲ
ಭಕ್ತರಿಗೆ ವರಗಳನು ಕೊಡಲು ಹೊತ್ತಿಲ್ಲ
ಪುತ್ರನ ಎತ್ತಿಕೋ ನಂದಗೋಪಾಲ ೧

ಮನೆಯೊಳಗೆ ಇರನೀತ ಬಹು ರಚ್ಚೆವಂತ[1]
ಮನೆವಾರ್ತೆ[2] ಯಾರು ಮಾಡುವರು ಶ್ರೀಕಾಂತ
ಗುಣಿಗುಣಗಳೊಳಗಿಪ್ಪ ಬಹು ಗುಣವಂತ
ಗುಣಬದ್ಧನಾಗಿಹ ಶ್ರೀಲಕ್ಷ್ಮೀಕಾಂತ ೨

ಕ್ಷೀರಾಂಬುನಿಧಿಯೊಳಗೆ ಸೆಜ್ಜೆ[3]ಯೊಳಗಿರುವ
ಶ್ರೀರಮಣ ಭಕ್ತರಿಚ್ಚೆಗೆ ನಲಿದು ಬರುವ
ಕಾರುಣ್ಯ ಹಯವದನ ಕಾಯ್ವ ತುರುಕರುವ
ನೀರೆ ಗೋಪಿಯರೊಳು ಮೆರೆವ ಕಡು ಚೆಲುವ ೩

---

1 ಹಠಮಾರಿ 2 ಮನೆಗೆಲಸ 3 ಹಾಸಿಗೆ

## ಮಾಹಾತ್ಮ್ಯ ಚಿಂತನ

(ಶಾಂತ ಭಾವ)

೧೧೮

ಕಂಗಳಿದ್ಯಾತಕೋ ಕಾವೇರಿ ರಂಗನ ನೋಡದ ಪ.

ಜಗಂಗಳೊಳಗೆ ಮಂಗಳ ಮೂರುತಿ
ರಂಗನ ಶ್ರೀಪಾದಂಗಳ ನೋಡದ ಅ.ಪ.

ಎಂದಿಗಾದರೊಮ್ಮೆ ಜನರು
ಬಂದು ಭೂಮಿಯಲ್ಲಿ ನಿಂದು
ಚಂದ್ರ ಪುಷ್ಕರಿಣಿ[1] ಸ್ನಾನವ ಮಾಡಿ ಆ-
ನಂದದಿಂದಲಿ ರಂಗನ ನೋಡದ ೧

ಹರಿಪಾದೋದಕ[2]ಸಮ ಕಾವೇರಿ
ವಿರಜಾನದಿ ಸ್ನಾನವ ಮಾಡಿ
ಪರಮ ವೈಕುಂಠ ರಂಗಮಂದಿರ
ಪರವಾಸುದೇವನ ನೋಡದ ೨

---

1 ಕೊಳ 2 ಗಂಗೆ

ಹಾರ ಹೀರ[1] ವೈಜಯಂತಿ[2]
ತೋರ ಮುತ್ತಿನ ಸರವ ಧರಿಸಿ
ತೇರನೇರಿ ಬೀದಿಲಿ
ಮೆರೆವ ರಂಗವಿಠಲನ ನೋಡದ ೩

೧೧೯

ಎಂಥಾದ್ದೊ ಹರಿಯ ಕರುಣ ಪ.

ಎಂಥಾದ್ದೊ ಹರಿಯ ಮಹಿಮೆ
ಎಂಥಾದ್ದೆನ್ನಬಾರದು ಗಡ ಅ.ಪ.

ಅಂತ್ಯವಿಲ್ಲದ ನಿಜಾನಂದ ತೃಪ್ತನು ಗಡ
ಸಂತ[3]ರೊಕ್ಕುಡಿತೆಯ ಜಲಕೆ ಹಿಗ್ಗುವ ಗಡ ೧

ಸನಕಾದಿ ಮುನಿಮನಕೆ ಸಿಲುಕದಗಮ್ಯನು ಗಡ
ನೆನೆವರ ಮನದಣಿಯೆ ತನ್ನ ತೋರುವ ಗಡ ೨

ಶ್ರುತಿ ತತಿ[4]ಗೆ ಪ್ರೈದೋರದತಿ ಮಹಿಮನು ಗಡ
ಮತಿಯುಳ್ಳವನ ಭಕ್ತಿ ಸ್ತುತಿಗೆ ಹಿಗ್ಗುವ ಗಡ ೩

ಲೋಕಪತಿಗಳಿಗೆಲ್ಲ ಒಡೆಯ ತಾನೆ ಗಡ
ಬಾಕುಳಿಕ[5]ನಾಗಿ ಭಕುತರ ವಶದಲ್ಲಿಪ್ಪ ಗಡ ೪

ಆರರೊಳು ಸಡ್ಡೆ[6]ಯಿಲ್ಲದ ನಿಸ್ಸಂಗನು ಗಡ
ಸಾರಿದವರಿಗೆ ತಂದೆ ತಾಯಿ ಸಿರಿಕೃಷ್ಣ ಗಡ ೫

---

1 ವಜ್ರ 2 ಕಂಠಮಾಲೆ 3 ಭಕ್ತ 4 ವೇದಸಮೂಹ
5 ಆಸಕ್ತ 6 ಅಭಿಮಾನ ಶ್ರದ್ಧೆ

೧೭೦

ತಾಯಿಯೆಂಬೆನೆ ನಿನ್ನ–ಧ್ರುವನ್ನ ತಾಯಿಯು ನಿನ್ನಂತೆ
ಕಾಯಿದಳೆ
ತಂದೆಯೆಂಬೆನೆ ನಿನ್ನ-ಪ್ರಹ್ಲಾದನ್ನ ತಂದೆ ನಿನ್ನಂತೆ ಕಾಯಿದನೆ
ಭ್ರಾತೃಯೆಂಬೆನೆ ನಿನ್ನ–ವಿಭೀಷಣನ್ನ ಭ್ರಾತೃ ನಿನ್ನಂತೆ
ಕಾಯಿದನೆ
ಪತಿಯೆಂಬೆನೆ ನಿನ್ನ–ದ್ರೌಪದಿಯ ಪತಿಗಳು ನಿನ್ನಂತೆ ಕಾಯಿದರೆ
ಪುತ್ರನೆಂಬೆನೆ ನಿನ್ನ–ಉಗ್ರಸೇನನ ಪುತ್ರ ನಿನ್ನಂತೆ ಕಾಯಿದನೆ
ಮಿತ್ರನೆಂಬೆನೆ ನಿನ್ನ–ಗಜೇಂದ್ರನ ಮಿತ್ರರು ನಿನ್ನಂತೆ
ಕಾಯಿದರೆ
ಆವ ಅನಿಮಿತ್ತ[1]ಬಂಧುವೊ ನೀನಾವ ಕರುಣಾಸಿಂಧುವೊ
ದೇವ ಕೃಷ್ಣ ನಿನಗೆ ಬಂಟರಲ್ಲಿ ನಂಟತನ ಹೊಸ ಪರಿಯಯ್ಯ
("ಸುಳಾದಿ"ಯಿಂದ)

೧೭೧

ಆಲದೆಲೆಯಲಿ ಮಲಗಿದಂದು ನೀ
ಲಾಲಿ ಲಾಲಿಯೆಂದು ಪಾಡಿದರಾರಯ್ಯ
ಮತ್ತೆ ಕ್ಷೀರಾಬ್ಧಿಯೊಳು ಮಲಗಿದಂದು ನಿನ್ನ
ತೃಪ್ತಿ ತೃಪ್ತಿಯೆಂದು ತೂಗಿದರಾರಯ್ಯ
ಆ ಜಲಧಿಯ ದರ್ಭಶಯನದಿ ನಿನ್ನನು
ಜೋ ಜೋ ಜೋ ಜೋಯೆಂದು ಪಾಡಿದರಾರಯ್ಯ
ಆ ರಮ್ಮೆ[2] ಶ್ರುತಿಗೂಡಿ ಪೊಗಳುವಂತೆ
ನಾರದ ಮಹತಿ[3]ಯು ಮಿಟುವಂತೆ ಸ–

1 ಕಾರಣವಿಲ್ಲದ 2 ಲಕ್ಷ್ಮಿ 3 ನಾರದರ ವೀಣೆ

ವಿಾರಜ[1] ಸ್ವರವೆತ್ತಿ ಪಾಡುವಂತೆ
ಶ್ರೀರಮಣ ನಿನ್ನ ಪೊಗಳಬಲ್ಲೆನೆ ನಾನು
ಕಣ್ಣು ಮುಚ್ಚಿ ನಗುತಿಂತೆನ್ನ ಸಥೆ[2]ಗೆ
ಕಣ್ಣುಮುಚ್ಚಿ ಕೃಷ್ಣ ಕಿವಿಯಂತಿದ್ದ

("ಸುಳಾದಿ"ಯಿಂದ)

೧೨೨

ಲೋಕಭರಿತನೋ ರಂಗಾನೇಕ ಚರಿತನೋ ಪ.

ಕಾಕುಜನರ[3] ಮುರಿದು ತನ್ನ
ಏಕಾಂತ ಭಕ್ತರ ಪೊರೆವ ಕೃಷ್ಣ ಅ.ಪ.

ರಾಜಸೂಯ ಯಾಗದಲ್ಲಿ
ರಾಜ ರಾಜರಿರಲು ಧರ್ಮ
ರಾಜ ಸುತನು ಈತನೇ ಸಭಾ
ಪೂಜ್ಯನೆಂದು ಮನ್ನಿಸಿದನಾಗ ೧

ಮಿಕ್ಕ ನೃಪರ ಜರಿದು ಅಮಿತ[4]
ವಿಕ್ರಮ ಯದುವರನೆ ತನಗೆ
ತಕ್ಕ ರಮಣನೆಂದು ರುಕ್ಮಿಣಿ
ಉಕ್ಕಿ ಮಾಲೆಯಿಕ್ಕಿದಳಾಗ ೨

ಜ್ಞಾನ ಶೂನ್ಯನಾಗಿ ಸೊಕ್ಕಿ
ತಾನೆ ವಾಸುದೇವನೆನಲು
ಹೀನ ಪೌಂಡ್ರಕನ ಶಿರವ
ಜಾಣರಾಯ ತರಿದನಾಗ ೩

---

1 ಹನುಮಂತ 2 ಸಲಿಗೆ, ಸದರ. 3 ದುಷ್ಟರು 4 ಅಪಾರ

ಉತ್ತರೆಯ ಗರ್ಭದಲ್ಲಿ
ಸುತ್ತ ಮುಂತ್ರಿದಸ್ತ್ರವನ್ನು
ಒತ್ತಿ ಚಕ್ರದಿಂದ ನಿಜಭಕ್ತ ಪರೀ
ಕ್ಷಿತನ ಕಾಯ್ದ ೪

ತನ್ನ ಸೇವಕ ಜನರಿಗೊಲಿದು
ಉನ್ನಂತ ಉಡುಪಿಯಲ್ಲಿ ನಿಂತು
ಘನ್ನ ಮಂದಿರ ಮಾಡಿಕೊಂಡ ಪ್ರ
ಸನ್ನ ಹಯವದನ ಕೃಷ್ಣ ೫

೧೨೩

ಉಗಾಭೋಗ

ಪೊಕ್ಕುಳಲ್ಲಿ ಗಂಡು[1] ಪಡೆದವರುಂಟೆ
ಉಂಗುಟದಲ್ಲಿ ಹೆಣ್ಣು[2] ಪಡೆದವರುಂಟೆ
ಮಿಕ್ಕಾದ ದೇವರಿಗೆ ಈ ಸೊಬಗುಂಟೆ
ಮರೆಹೊಕ್ಕೆ ಮರೆಹೊಕ್ಕೆ ಪುರಂದರವಿಠಲ

೧೨೪

ಉಗಾಭೋಗ

ಸ್ತ್ರೀಯರಿಗೆ ಪುರುಷರು ಮೋಹಿಸುವರಲ್ಲದಲೆ
ಪುರುಷರಿಗೆ ಪುರುಷರು ಮೋಹಿಸುವರುಂಟೆ ?
ಹರಿ ಪರಮ ಪುರುಷೋತ್ತಮ ಪುರುಷ ಬ್ರಹ್ಮಾದಿಗಳು
ನಿನಗೆ ಮೋಹಿಸುವರು, ತಿರುವೆಂಗಳಪ್ಪ ಸಿರಿ ಪುರಂದರವಿಠಲ
ಧರೆಯೊಳು ನೀನು ಮೋಹನ ರೂಪ ಕಾಣೋ

1 ಬ್ರಹ್ಮ 2 ಗಂಗೆ

೧೨೫

ಅಕೋ ಹಾಂಗಿಹಾನೆ ಇಕೋ ಹಿಂಗಿಹಾನೆ
ಪರಬ್ರಹ್ಮ ನಾರಾಯಣ ಹ್ಯಾಂಗಿಹಾನೆಂದರೆ ಪ.

ಕಾಲಿಲ್ಲದೆ ನಡೆಸುವ ಕೈಯಿಲ್ಲದ ಹಿಡಿಸುವ
ಹಲ್ಲಿಲ್ಲದೆ ತಿನಿಸುವ ಹೊಟ್ಟಿಲ್ಲದೆ ಉಣಿಸುವ ೧

ಕಣ್ಣಿಲ್ಲದೆ ಕಾಣಿಸುವ ಕಿವಿಯಿಲ್ಲದೆ ಕೇಳಿಸುವ
ಕಣ್ಣಿಗೆ ಕಾಣಿಸದಂತೆ ಒಳಗೆ ಹೊರಗೆ ತುಂಬಿರುವ ೨

ಶ್ವೇತದ್ವೀಪವಲ್ಲಿ ಕುಳಿತಾನಂತಾಸನದಿ ಮಲಗಿದ
ಖ್ಯಾತ ವೈಕುಂಠದಲ್ಲಿ ನಿಂತ ನಾಥ ಪುರಂದರವಿಠಲ ೩

೧೨೬

ಇಂಥ ಹೆಣ್ಣನು ನಾನೆಲ್ಲಿ ಕಾಣೆನು
ಹೊಂತಕಾರಿ[1] ಕಾಣಿರೋ ಪ.

ಸಂತತ ಸುರರಿಗೆ ಪೀಯೂಷ[2] ಉಣಿಸಿದ
ಪಂಕ್ತಿಯೊಳಗೆ ಪರವಂಚನೆ ಮಾಡಿದ ಅ.ಪ.

ಮಂದಗಿರಿ ತಂದು ಸಿಂಧು[3]ವಿನೊಳಿಟ್ಟು
ಚೆಂದದಿ ಕಡೆದು ಅಮೃತವ ತೆಗೆದು
ಇಂದುಮುಖಿ ನೀ ಬಡಿಸೆಂದು ಕೊಟ್ಟರೆ
ದಂಧನ[4]ಗಳ ಮಾಡಿ ದೈತ್ಯರ ವಂಚಿಸಿದ ೧

---

1 ಯುಕ್ತಿವಂತ, ಚತುರ, ಮೋಸಗಾರ. 2 ಅಮೃತ 3 ಸಮುದ್ರ
4 ಹಾವಳಿ

ವಿಶ್ವಾಸದಿಂದಲಿ ಅಸುರಗೆ ವರವಿತ್ತು
ತ್ರಿಶೂಲಧರ ಓಡಿ ಬಳಲುತಲಿರೆ
ನಸುನಗುತಲಿ ಬಂದು ಭಸ್ಮಾಸುರನಿಗೆ
ಭೋಗದಾಸೆಯ ತೋರಿ ಭಸ್ಮವ ಮಾಡಿದ ೨

ವಸುಧೆಯೊಳಗೆ ಹೆಣ್ಣು ಒಸಗೆ[1]ಯಾಗದ ಮುನ್ನ
ಬಸಿರ[2]ಲಿ ಬ್ರಹ್ಮನ ಪಡೆದವಳಿವಳು
ಕುಸುಮನಾಭ ಶ್ರೀ ಪುರಂದರವಿಠಲನ
ಪೆಸರು ಪೊತ್ತಿಹಳು ಈ ಪೊಸ ಕನ್ನಿಕೆ ೩

೧೨೭

ಸುಳಾದಿ

ಧ್ರುವತಾಳ

ಅಣುವಾಗಬಲ್ಲ ಮಹತ್ತಾಗ ಬಲ್ಲ
ಅಣುಮಹತ್ತೆರಡೊಂದಾಗ ಬಲ್ಲ
ರೂಪವಾಗ ಬಲ್ಲ ಅರೂಪಾಗ ಬಲ್ಲ
ರೂಪ ಅರೂಪ ಎರಡೊಂದಾಗ ಬಲ್ಲ
ವ್ಯಕ್ತ[3]ನಾಗ ಬಲ್ಲ ಅವ್ಯಕ್ತನಾಗ ಬಲ್ಲ
ವ್ಯಕ್ತ ಅವ್ಯಕ್ತ ಎರಡೊಂದಾಗ ಬಲ್ಲ
ಅಘಟನಘಟನ ಶಕ್ತ ಅಚಿಂತ್ಯಾದ್ಭುತ ಮಹಿಮ
ಸ್ವಗತ ಭೇದ ವಿವರ್ಜಿತ ಪುರಂದರವಿಠಲ

---

1 ಶೋಭನ 2 ಗರ್ಭ, ಹೊಟ್ಟೆ 3 ಗೋಚರ

### ಮಠ್ಯತಾಳ

ಕಣ್ಣಲ್ಲಿ ಕೇಳುವ ಕಾಂಬುವನರಿವ
ಆಘ್ರಾಣಿಸು[1]ವ ಆಸ್ವಾದಿಸುವ
ಶ್ರವಣದಿ ಕೇಳುವ ಕಾಂಬುವನರಿವ
ಆಘ್ರಾಣಿಸುವ ಆಸ್ವಾದಿಸುವ

ರಸನ[2]ದಿ ಕೇಳುವ ಕಾಂಬುವನರಿವ
ಆಘ್ರಾಣಿಸುವ ಆಸ್ವಾದಿಸುವ
ಸ್ಪರುಶದಿ ಕೇಳುವ ಕಾಂಬುವನರಿವ
ಆಘ್ರಾಣಿಸುವ ಆಸ್ವಾದಿಸುವ

ಘ್ರಾಣ[3]ದಿ ಕೇಳುವ ಕಾಂಬುವನರಿವ
ಆಘ್ರಾಣಿಸುವ ಆಸ್ವಾದಿಸುವ
ಲೋಕ ವಿಲಕ್ಷಣ ದಿವ್ಯಕರುಣ
ಲೋಕರಿಗಾಶ್ಚರ್ಯ ಪುರಂದರವಿಠಲ ೨

### ತ್ರಿಪುಟ ತಾಳ

ಆವಾವ ಯುಗದಲ್ಲಿ ವಿಷ್ಣು ವ್ಯಾಪಕನಾಗಿ
ಆ ವಿಷ್ಣುವಿಂದಲೆ ವಿಷ್ಣುಲೋಕ ತಾನಿಪ್ಪುದಾಗಿ
ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ
ಸಾರ್ಷ್ಣಿತಾ ಎಂಬುದು ವಿಷ್ಣು ತಾನಿಪ್ಪನಾಗಿ
ನಮ್ಮ ಪುರಂದರವಿಠಲ
ಬೊಮ್ಮ ಭರಿತ ಪಂಚವಿಧ ಮುಕುತಿದಾಯಕನು ೩

---

1 ವಾಸನೆ ನೋಡು 2 ನಾಲಗೆ 3 ಮೂಗು

ಅಟತಾಳ

ಮೋದ ದಕ್ಷಿಣ ಪಕ್ಷ ಪ್ರಮೋದ ಉತ್ತರ ಪಕ್ಷ
ಆನಂದ ಆತುಮ ಆ ನಖ ಆ ಪಾದ
ಅಪ್ರಾಕೃತ ವಿಗ್ರಹ ನಮ್ಮ
ಪುರಂದರವಿಠಲ ಆನಂದ ಆತುಮ ೪

ಆದಿತಾಳ

ನಾರಾಯಣ ಪರಬೊಮ್ಮ ಶ್ವೇತತನೂರುಹ
ಬಲಭದ್ರಗಡ, ಕೃಷ್ಣತನೂರುಹ ಕೃಷ್ಣಗಡ,
ಕೃಷ್ಣ ವಾಸುದೇವ ಪುರಂದರವಿಠಲ
ನಾರಾಯಣ ಪರಬೊಮ್ಮ ಗಡ ೫

ರೂಪಕ ತಾಳ

ಹೊರಗಿಪ್ಪ ಒಳಗಿಪ್ಪ ಹೊರಗಿರಲರಿಯ ಒಳಗಿಪ್ಪ
ಹೊರಗಿಪ್ಪ ಒಳಗಿರಲರಿಯ
ಒಳಗೆ ಹೊರಗೆ ತುಂಬಿಕೊಂಡಿಹ
ತಾನಿಲ್ಲದ ಠಾವು ಎಳ್ಳನಿತಿಲ್ಲ
ಸರ್ವವಿಷ್ಣು ವಾಸುದೇವ
ಪರಿಪೂರ್ಣ ಪುರಂದರವಿಠಲ ೬

ಜತೆ

ನಮೋ ನಮೋ ವಾಗೀಶ ನಮೋ ನಮೋ ಸರ್ವೇಶ
ನಮೋ ಪುರಂದರವಿಠಲರೇಯ

೧೨೮

ನೋಡುವುದೇ ಕಣ್ಣು, ಕೇಳುವುದೇ ಕಿವಿ
ಪಾಡುವುದೇ ವದನ ಪ.

ಗಾಡಿಕಾರ[1] ಶ್ರೀವೇಣುಗೋಪಾಲನ
ಕೂಡಿ ಕೊಂಡಾಡುವ ಸುಖದ ಸೊಬಗನು ಅ.ಪ.

ಪೊಂಗೊಳಲೂದುತ ಮೃಗ ಪಕ್ಷಿಗಳನೆಲ್ಲ
ಸಂಗಳಿಸು[2]ತಲಿಪ್ಪನ
ಅಂಗಜ ಜನಕ ಗೋಪಾಂಗನೇರೊಡನೆ ಬೆಳ
ದಿಂಗಳೊಳಗೆ ಸುಳಿದಾಡೊ ರಂಗಯ್ಯನ ೧

ನವಿಲಂತೆ ಕುಣಿವ ಹಂಸೆಯಂತೆ ನಲಿಯುವ
ಮರಿಕೋಗಿಲೆಯಂತೆ ಕೂಗುವ
ಎರಳೆ[3]ಯ ಮರಿಯಂತೆ ಚಿಗಿಚಿಗಿದಾಡುವ
ತುಂಬಿ ಝೇಂಕರಿಸುವಂದದಿ ಝೇಂಕರಿಪನ ೨

ಮಾರೇಡಃ[4] ಕುಬ್ಜೆಯ ಡೊಂಕು ತಿದ್ದಿ ರೂಪವ ಮಾಡಿ
ಸೆರೆಯ ಬಿಡಿಸಿಕೊಂಬನ
ಗರುಡಗಮನ ಸಿರಿ ಪುರಂದರವಿಠಲನ
ಶರಣಾಗತ ಸುರಧೇನು[5] ರಂಗಯ್ಯನ ೩

೧೨೯

ನೀ ಮಾಯೆಯೊಳಗೊ, ನಿನ್ನೊಳು ಮಾಯೆಯೋ ಪ.
ನೀ ದೇಹದೊಳಗೊ, ನಿನ್ನೊಳು ದೇಹವೋ ಅ.ಪ.

---

1 ಸುಂದರನಾದವನು 2 ಕೂಡು, ಸೇರಿಸು. 3 ಜಿಂಕೆ 4 ಗೂಸು
5 ಕಾಮಧೇನು

ಬಯಲು ಆಲಯದೊಳಗೊ, ಆಲಯವು ಬಯಲೊಳಗೊ
ಬಯಲು ಆಲಯವೆರಡು ನಯನದೊಳಗೊ
ನಯನ ಬುದ್ಧಿಯೊಳಗೊ ಬುದ್ಧಿ ನಯನದೊಳಗೊ
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ೧

ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ
ಜಿಹ್ವೆ ಮನಸಿನೊಳಗೊ, ಮನಸು ಜಿಹ್ವೆಯೊಳಗೊ
ಜಿಹ್ವೆ ಮನಸುಗಳೆರಡು ನಿನ್ನೊಳಗೊ ಹರಿಯೆ ೨

ಕುಸುಮದೊಳು ಗಂಧವೊ, ಗಂಧದೊಳು ಕುಸುಮವೊ
ಕುಸುಮ ಗಂಧಗಳೆರಡು ಘ್ರಾಣ[1]ದೊಳಗೊ
ಅಸಮಭವ ಕಾಗಿನೆಲೆಯಾದಿಕೇಶವರಾಯ
ಉಸುರಲೆನ್ನಳವಲ್ಲ ಎಲ್ಲ ನಿನ್ನೊಳಗೊ ೩

೧೩೦

ಆನಂದ ಆನಂದ ಮತ್ತೆ ಪರಮಾನಂದ ಪ.
ಆ ನಂದನಕಂದನೊಲಿಯೆ ಏನೆಂದದ್ದೆ ವೇದವೃಂದ ಅ.ಪ.

'ಅ' ಮೊದಲು 'ಕ್ಷ' ಕಾರಾಂತ ಈ ಮಹಾವರ್ಣಗಳೆಲ್ಲ ೧
ಸ್ವಾಮಿಯಾದ ವಿಷ್ಣುವಿನ ನಾಮವೆಂದು ತಿಳಿದವಗೆ

ಜಲ ಕಾಷ್ಟ[2] ಶೈಲ[3] ಗಗನ ನೆಲ ಪಾವಕ[4] ವಾಯು ತರು ೨
ಫಲ ಪುಷ್ಪ ಬಳ್ಳಿಗಳ ಒಳಗೆ ಹರಿವ್ಯಾಪ್ತನೆಂಬವಗೆ

---

1 ಮೂಗು 2 ಕಟ್ಟಿಗೆ 3 ಬೆಟ್ಟ 4 ಬೆಂಕಿ

ತಾರೋ ಬಾರೋ ಬೀರೋ ಸಾರೋ ಹಾಕೋ ಹೀರೋ
ಹೋರೋ ಸೇರೋ
ಯಾರೋ ತೋರೋ ಎಂಬುದ್ಧರಿಯ ಪ್ರೇರಣೆ ಎಂದರಿತವಗೆ ೩

ಪೋಪುದು ಬರುತಿಪ್ಪುದು ಮತ್ತೆ ಕೋಪ ಶಾಂತಮಾಡುವುದು
ರೂಪು ಲಾವಣ್ಯ ಹರಿಯ ವ್ಯಾಪಾರವೆಂದರಿತವಗೆ ೪

ಮಧ್ವಶಾಸ್ತ್ರ ಪ್ರವಚನ ಮುದ್ದು ಕೃಷ್ಣನ ದರುಶನ
ಶುದ್ಧ ವಿಜಯವಿಠಲನ್ನ ಪೊದ್ದಿ ಕೊಂಡಾಡುವಗೆ ೫

## ೧೩೧

## ಉಗಾಭೋಗ

ಕ್ಷೀರಸಾಗರ ಬಿಟ್ಟು ಲವಣ[1] ಸಾಗರದಲ್ಲಿ
ಮನೆಯ ಕಟ್ಟುವರೇನೋ
ಉತ್ತಮ ತ್ರಿಧಾಮ[2]ವ ಬಿಟ್ಟು ಮರ್ತ್ಯಲೋಕದಲ್ಲಿ
ಬಂದು ಪುಟ್ಟುವರೇನೋ
ನಿತ್ಯ ಸರ್ವಜ್ಞ ಪ್ರಕಾಶ ಮತ್ತೆ ಯಾದವರ ಕೂಡಿ
ಆಡುವುದೇನೋ
ನಿತ್ಯ ತೃಪ್ತನು ನೀನು ಮುಕ್ತರೊಡೆಯ ರಂಗ
ಮತ್ತೆ ವಿದುರನ ಮನೆಯ ಪಾಲ್ಕುಡಿವರೇನೋ
ಸತ್ಯಸಂಕಲ್ಪ ಗೋಪಾಲವಿಠಲ ನಿನ್ನ
ಕೃತ್ಯಕೊಂದನಂತಾನಂತ ನಮೋ ನಮೋ ಎಂಬೆ

---

1 ಉಪ್ಪು 2 ಶ್ವೇತದ್ವೀಪ, ಅನಂತಾಸನ, ವೈಕುಂಠ

೧೩೨

ಬಲು ರಮ್ಯ[1]ವಾಗಿದೆ ಹರಿಯ ಮಂಚ ಪ.
ಎಲರುಣಿ[2]ಕುಲ ರಾಜ ರಾಜೇಶ್ವರ ಮಂಚ ಅ.ಪ.

ಪವನತನಯ ಮಂಚ ಪಾವನತರ ಮಂಚ
ಭುವನತ್ರಯವ ಪೊತ್ತ ಭಾರಿ ಮಂಚ
ಕಿವಿಗಳಿಲ್ಲದ ಮಂಚ, ಶ್ರೀನಿಕೇತನ ಮಂಚ
ಶಿವರೂಪದಲಿ ಹಿಂದೆ ಹರಿಯನೊಲಿಸಿದ ಮಂಚ ೧

ನೀಲಾಂಬರವನುಟ್ಟು ನಳನಳಿಸುವ ಮಂಚ
ನಾಲಿಗೆ ಎರಡುಳ್ಳ ನೈಜ[3]ಮಂಚ
ನಾಲ್ವತ್ತು ಕಲ್ಪದಿ ತಪವ ಮಾಡಿದ ಮಂಚ
ತಾಲ ಮುಸಲ[4] ಹಲ[5]ವ ಹಿಡಿದಿರುವ ಮಂಚ ೨

ರಾಮನನುಜನಾಗಿ ರಣವ ಜಯಿಸಿದ ಮಂಚ
ತಾಮಸ ರುದ್ರನನು ಪಡೆದ ಮಂಚ
ಭೀಮಾವರಜ[6]ನೊಳು ಆವೇಶಿಸಿದ ಮಂಚ
ಜೀಮೂತ[7]ಮಂಡಲವ ತಡೆಗಟ್ಟಿದ ಮಂಚ ೩

ಜೀವನಾಮಕನೆನಿಸಿ ವ್ಯಾಪ್ತನಾಗಿ ಹರಿಯ
ಸೇವಿಸಿ ಸುಖಿಸುವ ದಿವ್ಯಮಂಚ
ಸಾವಿರ ಮುಖದಿಂದ ತುತಿಸಿ ಹಿಗ್ಗುವ ಮಂಚ
ದೇವಕೀ ಜಠರದಿಂ ಸೆಳೆಸಿಕೊಂಡ ಮಂಚ ೪

---

1 ಮನೋಹರ 2 ಹಾವು 3 ಸಹಜ 4 ಒನಕೆ 5 ನೇಗಿಲು 6 ತಮ್ಮ
7 ಮೋಡ

ವಾರುಣೀದೇವಿಗೆ ವರನೆನಿಸಿದ ಮಂಚ
ಸಾರುವ ಭಕುತರ ಸಲಹೊ ಮಂಚ
ಕಾರುಣ್ಯನಿಧಿ ಜಗನ್ನಾಥ ವಿಠಲನ ವಿ-
ಹಾರಕ್ಕೆ ಯೋಗ್ಯವಾದ ವಿಮಲ ಶೇಷ ಮಂಚ ೫

೧೩೩

ಎಚ್ಚರಿಕೆಚ್ಚರಿಕೆ ಪ.
ನಿಶ್ಚಿಂತೆಯಲಿ ಹರಿಯ ಧ್ಯಾನವ ಮಾಡುವುದಕ್ಕೆ ಅ.ಪ.

ಅಜ[1]ನು ತೊಳೆದು ಅರ್ಚಿಸುವ ಶ್ರೀಪಾದಕ್ಕೆ ಎಚ್ಚರಿಕೆ
ಧ್ವಜ ವಜ್ರರೇಖೆಯಿಂದೊಪ್ಪುವ ಪಾದಕ್ಕೆ ಎಚ್ಚರಿಕೆ
ವ್ರಜದ ಗೋಪಿಯರು ಭಜಿಸುವ ಪಾದಕ್ಕೆ ಎಚ್ಚರಿಕೆ
ಸುಜನರೆಲ್ಲರು ಬಂದು ಎರಗುವ ಪಾದಕ್ಕೆ ಎಚ್ಚರಿಕೆ ೧

ಸುರರೆಲ್ಲರು ಬಂದು ಎರಗುವ ಪಾದಕ್ಕೆ ಎಚ್ಚರಿಕೆ
ಸರಸಿಜಾಕ್ಷಿ ಸವಿದೊತ್ತುವ ಪಾದಕ್ಕೆ ಎಚ್ಚರಿಕೆ
ಗರುಡನೇರಿ ಮೆರೆವ ಗಾಂಭೀರ್ಯ ಪಾದಕ್ಕೆ ಎಚ್ಚರಿಕೆ
ಉರಗ[2]ನ ಮೇಲೆ ಓಡ್ಯಾಡಿದ ಪಾದಕ್ಕೆ ಎಚ್ಚರಿಕೆ ೨

ಲಲನೆಯರ ಸ್ತನ[3]ದಲ್ಲಿ ಕುಣಿದಂಥ ಪಾದಕ್ಕೆ ಎಚ್ಚರಿಕೆ
ಜಲಜಾಸನ ಬಂದು ವಂದಿಪ ಪಾದಕ್ಕೆ ಎಚ್ಚರಿಕೆ
ಶಿಲೆಯು ಸ್ತ್ರೀಯಳ ಮಾಡಿದ ಶೃಂಗಾರ ಪಾದಕ್ಕೆ ಎಚ್ಚರಿಕೆ
ಚೆಲುವ ಹಯವದನನ ಚರಣಾರವಿಂದಕ್ಕೆ ಎಚ್ಚರಿಕೆ ೩

1 ಬ್ರಹ್ಮ 2 ಹಾವು 3 ಮೊಲೆ

೧೩೪

ಈತ ರಂಗನಾದ ಹರಿಯು । ಆತ ಲಿಂಗನಾದ ಹರನು ಪ.

ಗಿರಿಜಾಪತಿಯಾದನಾತ । ಗಿರಿಯ ಬೆನ್ನಿಲಿ ತಾಳಿದನೀತ
ಸ್ಮರ[1]ನ ಮಡುಹಿದನಾತ । ಸ್ಮರನ ಜನಕನಾದನೀತ ೧

ಶೇಷ ಭೂಷಣನಾದನಾತ । ಶೇಷಶಾಯಿಯಾದನೀತ
ಪೋಷಿಪ ಭಕ್ತರನಾತ । ದೋಷದೂರಾದನೀತ ೨

ಕಂಗಳು ಮೂರುಳ್ಳವನಾತ । ಮಂಗಳದೇವೇಶನೀತ
ತುಂಗ[2] ಹೊಳವನಕಟ್ಟೆರಂಗನೀತ ಲಿಂಗನಾತ ೩

೧೩೪ಎ

ಎಲ್ಲಿಂದ ಬಂದೆ ಮುಂದೆತ್ತ ಪ್ರೈಣ[3]
ಇಲ್ಲಿ ನಿನಗೆಷ್ಟು ದಿನವಾಲಸ್ಯ ಮರುಳೆ ಪ.

ಮಾತೆಯುದರದೊಳು ನವಮಾಸ ಮಲಮೂತ್ರದೊಳು
ಯಾತನೆಯು ಯೋನಿಮುಖಮಾರ್ಗವಿಡಿದು
ಭೂತಳಕೆ ಬಂದ ಹದನೇನು ತೀರಿಸಿಕೊಂಡೆ
ಜಾತಿ ಯಾವುದು ನಿನ್ನ ಪೆಸರೇನು ಮರುಳೆ ೧

ಮುಂದ್ಯಾವ ಪಥ[4]ವ ಸೇರುವೆ ಮರುಳೆ ಸಾಕಿನ್ನು
ಹಿಂದೆ ನೆರವಾಗಿ ನಿನಗಾಪ್ತರುಂಟೆ
ಒಂದುಗೂಡಿದ ಸತಿಸುತರೆಲ್ಲ ವರ್ಜಿಪರು
ನಿಂದು ಮಾತಾಡು ಬಳಲಿದೆ ಬರಿದೆ ಮರುಳೆ ೨

---

1 ಮನ್ಮಥ 2 ಶ್ರೇಷ್ಠ 3 ಪ್ರಯಾಣ 4 ಮಾರ್ಗ

ಬರವಿದ್ಯಾತಕೆ, ನಿನ್ನ ಸ್ಥಳವೆಲ್ಲಿ, ನೆಲೆಯಹಾಗಿ
ಇರುವ ಮಂದಿರವ್ಯಾವುದದನೆನಗೆ ಪೇಳೋ
ಧರೆಯೊಳಗೆ ಮಠ ಕಾಗಿನೆಲೆಯಾದಿಕೇಶವನ
ಸಿರಿ ಚರಣ ಕಮಲವನು ನೆರೆನಂಬಿ ಸುಖಿಸೋ ೩

## ೧೩೪೮

## ತತ್ತ್ವ ಸುವ್ವಾಲಿಗಳು

ನಿತ್ಯಬದ್ಧ[1]ನು ನಾನು ನಿತ್ಯಮುಕ್ತನು ನೀನು
ಭೃತ್ಯನೋ ನಾನು ಪ್ರಭು ನೀನು । ಮೂರ್ಲೋಕ
ವ್ಯಾಪ್ತನು ನೀನು ಅಣು ನಾನು

ಭೂಮಂಡಲವೆ ಪೀಠ ವ್ಯೋಮಮಂಡಲ[2] ಛತ್ರ[3]
ಸೋಮ ಸೂರ್ಯರೇ ಮಹದೀಪ । ನಕ್ಷತ್ರ
ಸ್ತೋಮ[4]ವೇ ನಿನಗೆ ಉಪದೀಪ[5]

ಮಳೆಯೇ ಮಜ್ಜನ[6]ವು ದಿಗ್ವಲಯಂಗಳೇ ವಸನ[7]
ಬೆಳೆವ ಬೆಳಸುಗಳೆ ನೈವೇದ್ಯ । ಜನರ ಕಂ
ಗಳ ಕಾಂತಿ ನಿನಗೆ ಆರಾರ್ತಿ[8]

ತರುಗಳೇ ಚಾಮರಗಳಾಗಿರ್ಪುವು ನಿನಗೆ
ಶರಧಿ ಘೋಷಗಳೆ ಮಹವಾದ್ಯ । ಜೀವರ
ಸ್ವರಗಳೇ ನಿನಗೆ ಸಂಗೀತ

---

1 ಬಂಧನ 2 ಆಕಾಶ 3 ಕೊಡೆ 4 ಸಮೂಹ
5 ಸಾಲುದೀಪ 6 ಸ್ನಾನ 7 ಬಟ್ಟೆ 8 ಆರತಿ (?)

ಪಾತಾಳ ಪಾದುಕೆ ವಿಧಾತೃಲೋಕ[1]ವೆ ಮಕುಟ[2]
ಶ್ವೇತದ್ವೀಪ[3]ವೇ ನಿನಗೆ ಒಡ್ಯಾಣ[4] । ವೈಕುಂಠ[5]
ಆತಪತ್ರ[6]ವ ನಿನಗೀವೆ

ನಡೆವುದೇ ಹರಿಯಾತ್ರೆ ನುಡಿವುದೇ ಹರಿನಾಮ
ಕುಡಿವ ನೀರುಗಳೆ ಅಭಿಷೇಕ । ದಿನದಿನದಿ
ಒಡಲಿಗುಂಬನ್ನ ನೈವೇದ್ಯ

ಮುನ್ನಾವ ಜನ್ಮದ ಪುಣ್ಯ ಫಲಿಸಿತೊ ಎನಗೀಗ
ನಿನ್ನಂಥ ಸ್ವಾಮಿ ಎನಗಾದೆ । ಆದರಿಂದ
ಧನ್ಯರೋ ನಮ್ಮ ಹಿರಿಯರು

—ಜಗನ್ನಾಥದಾಸರು

೧೩೪೭

ಕಲ್ಲಿನಿಂದ ಸರ್ವಫಲ ಬಾಹುದೊ ಪ.

ಕಲ್ಲು ಭಜಿಸಿದರೆ ಕೈವಲ್ಯ[7] ತೋರುವುದೊ ಅ.ಪ.

ಕಲ್ಲು ಕಡೆಯುತ್ತಿರಲು ಅಮೃತವೇ ಹುಟ್ಟಿತು
ಕಲ್ಲು ಎತ್ತಲು ಮಳೆಯೊಳೆಲ್ಲವರು ಉಳಿದರು
ಕಲ್ಲು ಹರಿಪಾದವನು ಸೋಂಕೆ ಹೆಣ್ಣಾಯಿತು
ಕಲ್ಲು ಲಂಕೆಗೆ ಮಾರ್ಗ ಚೆನ್ನಾಗಿ ಶೋಭಿಸಿತು ೧

1 ಬ್ರಹ್ಮಲೋಕ 2 ಕಿರೀಟ 3 ವಿಷ್ಣುವಿನ ನೆಲೆ 4 ಡಾಬು
5 ವಿಷ್ಣುವಿನ ನೆಲೆ 6 ಕೊಡೆ 7 ಮೋಕ್ಷ

ಕಲ್ಲಿನೊಳಗೆ ದೇವನೊಡಮೂಡಿ ಕಾಣಿಸುವ
ಕಲ್ಲು ಕೊರೆಯಲು ಮೂರ್ತಿವಂತಾಹುದು
ಕಲ್ಲು ದೇವರ ಗುಡಿಗೆ ಗರುಡಗಂಬವು ಆಯ್ತು
ಕಲ್ಲು ಕೋಟ್ಯನುಕೋಟಿಗೆಲ್ಲ ಬೆಲೆಯಾಯ್ತು ೨

ಕಲ್ಲೆಂದುಪೇಕ್ಷಿಸದೆ[1] ಕಾಲಕಾಲದಿ ನಿಮ್ಮ
ಕಲ್ಲು ಮನಸನು ಬಿಟ್ಟು ಪೂಜೆಮಾಡಿ
ಕಲ್ಲಿನೊಳಗಿದ್ದ ಸಿರಿ ವಿಜಯವಿಠಲ ಒಳ್ಳೆ
ಕಲ್ಲು ಪದವಿಯ ಕೊಟ್ಟು ಸತತ ಪಾಲಿಪನೊ ೩

1 ಅಸಡ್ಡೆ ಮಾಡದೆ

## ಹರಿ ಸರ್ವೋತ್ತಮತ್ವ

೧೩೫

ಹರಿಯೇ ಸರ್ವೋತ್ತಮ ಹರಿಯೇ ಪರದೇವತೆ
ಹರಿ ಸರ್ವ ವಿಶ್ವಮಯಂ ಜಗತು ಪ.

ಹರಿಯಲ್ಲದನ್ಯತ್ರ[1] ದೈವಂಗಳಿಲ್ಲವೆಂದು
ಉರಗನ ಹೆಡೆಯನ್ನು ಪಿಡಿದು ಹೇಳುವೆನಯ್ಯ ಅ.ಪ.

ಜಗವ ಪುಟ್ಟಿಸುವ ಬ್ರಹ್ಮ ನಿನ್ನ ಮಗ
ಜಗವ ಸಂಹರಿಸುವ ರುದ್ರ ಮೊಮ್ಮಗನು
ಜಗದ ಪಾವನೆ ಭಾಗೀರಥಿ[2] ನಿನ್ನ ಮಗಳಯ್ಯ
ಜಗದ ಜೀವನ ಮಾತೆ ನಿನ್ನರಸಿಯೋ ದೇವ ೧

ವಿಶ್ವತೋಮುಖ ನೀನೆ ವಿಶ್ವತಶ್ಚಕ್ಷು ನೀನೆ
ವಿಶ್ವತೋಬಾಹು ವಿಶ್ವಪಾದನು ನೀನೆ
ವಿಶ್ವ ಉದರ ನೀನೆ ವಿಶ್ವವ್ಯಾಪಕ ನೀನೆ
ವಿಶ್ವನಾಟಕ ಸೂತ್ರಧಾರಿಯೆ ವಿಷ್ಣುವೆ ೨

ಆಗಮ ನಿಗಮ ಪುರಾಣಗಳೆಲ್ಲವು
ಯೋಗಿ ಜನಗಳೆಲ್ಲ ಪೊಗಳುತ್ತಿರೆ
ನಾಗಶಯನ ಭೋಗಿಭೂಷಣ ವಂದಿತ
ಭಾಗವತರ ಪ್ರಿಯ ಪುರಂದರವಿಠಲ ೩

---

1 ಇತರ 2 ಗಂಗೆ

೧೩೬

ನಮ್ಮ ದೇವ ನಿಮ್ಮ ದೇವ ತಮ್ಮದೇವನೆನಬೇಡಿ
ಬೊಮ್ಮನ[1] ಪಡೆದ ದೇವನೊಬ್ಬನೆ ಕಾಣಿರೋ ಪ.

ಆದಿಯಲ್ಲಿ ಕರಿ ಮಕರಿ[2]ಗೆ ಸಿಕ್ಕಿ ಬಾಧೆಯಿಂದ
ಆದಿದೇವ ಕಾಯೆಂದು ಮೊರೆಯಿಡಲು
ಆ ದೇವ ಈ ದೇವ ಕಾಯ್ವುದಿಲ್ಲ ಕೇಳಿ
ಮಾಧವ ತಾ ಬಂಧು ಸಲಹಿದ ಕಾರಣ ೧

ಹರಿಹರ ಬ್ರಹ್ಮರೊಳು ಹಿರಿಯವರಾರೆಂದು
ಪರಿಕಿಸಿ[3] ಸುರಾಸುರರೆಲ್ಲರನು
ವರ ಭೃಗುಮುನಿ ಬಂದು ಕರವೆತ್ತಿ ಸ್ಥಿರವಾಗಿ
ಹರಿಯೇ ಪರದೈವವೆಂದು ಅರುಹಿ[4]ದ ಕಾರಣ ೨

ಏಕೋ ವಿಷ್ಣು ಎಂತೆಂದು ವೇದಗಳು ಅ
ನೇಕ ಮುಖಗಳಿಂದ ಸಾರುತಿವೆ
ಕಾಕುಮತಿ[5]ಯ ನೀಗಿ ಜೋಕೆಯಿಂದ ಭಜಿಸಿರೊ
ಶ್ರೀಕಾಂತ ಪುರಂದರವಿಠಲರಾಯನ ೩

೧೩೭

ಈ ಪರಿಯ ಸೊಬಗಾವ ದೇವರಲಿ ಕಾಣೆ ಪ.
ಗೋಪೀಜನ ಪ್ರಿಯ ಗೋಪಾಲಗಲ್ಲದೆ ಅ.ಪ.

---



1 ಬ್ರಹ್ಮ 2 ಮೊಸಳೆ 3 ಪರೀಕ್ಷಿಸಿ 4 ಹೇಳು 5 ಕೀಳುಬುದ್ಧಿ

ದೊರೆಯುತನದಲಿ ನೋಡೆ ಧರಣಿದೇವಿಗೆ ರಮಣ
ಸಿರಿಯುತನದಲಿ ನೋಡೆ ಶ್ರೀಕಾಂತನು
ಹಿರಿಯುತನದಲಿ ನೋಡೆ ಸರಸಿಜೋದ್ಭವನಯ್ಯ
ಗುರುವುತನದಲಿ ನೋಡೆ ಜಗದಾದಿ ಗುರುವು ೧

ಪಾವನ[1]ತ್ವದಿ ನೋಡೆ ಅಮರಗಂಗಾಜನಕ
ದೇವತ್ವದಲಿ ನೋಡೆ ದಿವಿಜರೊಡೆಯ
ಲಾವಣ್ಯದಲಿ ನೋಡೆ ಲೋಕಮೋಹಕನಯ್ಯ
ಆವ ಧೈರ್ಯದಿ ನೋಡೆ ಅಸುರಾಂತಕ ೨

ಗಗನದಲಿ ಸಂಚರಿಪ ಗರುಡದೇವನೆ ತುರಗ[2]
ಜಗತೀಧರ ಶೇಷ ಪರಿಯಂಕಶಯನ
ನಿಗಮಗೋಚರ ಪುರಂದರವಿಠಲಗಲ್ಲದೆ
ಮಿಗಿಲಾದ ದೈವಗಳಿಗೀ ಭಾಗ್ಯವುಂಟೆ ೩

೧೩೮

ಬಲ್ಲವರೆ ಬಲ್ಲರು ಎಲ್ಲವರರಿಯರು
ಫುಲ್ಲಲೋಚನ ಪರಬ್ರಹ್ಮನೆಂಬುದನು ಪ.

ಅಜನು ಅಧಿಕ ಬಲ್ಲ ಅನಲಸ್ನೇಹಿತ[3] ಬಲ್ಲ
ಗಜಚರ್ಮಾಂಬರ ಬಲ್ಲ ಗರುಡ ಬಲ್ಲ
ಭುಜಗೇಶ್ವರನು ಬಲ್ಲ ಭೂರಿಲೋಚನ[4] ಬಲ್ಲ
ತ್ರಿಜಗಾಧಿಪತಿ ತ್ರಿವಿಕ್ರಮನೆಂಬುದನು ೧

---

1 ಪವಿತ್ರ 2 ಕುದುರೆ 3 ವಾಯು 4 ಇಂದ್ರ

ಅಂಬರೀಷನು ಬಲ್ಲ ಅತ್ರಿಋಷಿಯು ಬಲ್ಲ
ಸಂಭ್ರಮದಿ ಭೀಮ ಬಲ್ಲ ಸಹದೇವ ಬಲ್ಲ
ಬೆಂಬಿಡದುದ್ಧವ ಬಲ್ಲ ಬೇಡಿದ ಧ್ರುವ ಬಲ್ಲ
ಕಂಬು[1]ಚಕ್ರಧರ ಸರ್ವೋತ್ತಮನೆಂಬುದನು ೨

ಶುಕಯೋಗೀಶ್ವರ ಬಲ್ಲ ಸುಗುಣ ನಾರದ ಬಲ್ಲ
ಭಕುತ ಪ್ರಹ್ಲಾದ ಬಲ್ಲ ಬಲಿಯು ಬಲ್ಲ
ರುಕುಮಾಂಗದನು ಬಲ್ಲ ಋಷಿ ಪರಾಶರ ಬಲ್ಲ
ಮಕರಕುಂಡಲಧರ ಪರಾತ್ಪರನೆಂಬುದನು ೩

ವಸಿಷ್ಠಮುನಿ ಬಲ್ಲ ವರ ವಿಭೀಷಣ ಬಲ್ಲ
ವಿಷಧರೇಂದ್ರನು ಬಲ್ಲ ವಿದುರ ಬಲ್ಲ
ವಸು ಭೀಷ್ಮನು ಬಲ್ಲ ಅಸು ಪರೀಕ್ಷಿತ ಬಲ್ಲ
ಶಶಿ ಮಿತ್ರಸಖ[2]ನೇತ್ರ ಸರ್ವೋತ್ತಮನೆಂಬುದನು ೪

ಯೋಗೀಂದ್ರ ಅಕ್ರೂರ ಬಲ್ಲ ವಕ್ತೃಶೌನಕ ಬಲ್ಲ
ಯೋಗಿ ಕಪಿಲ ಬಲ್ಲ ಭೃಗು ಬಲ್ಲನು
ತ್ಯಾಗಿ ಧರ್ಮಜ ಬಲ್ಲ ರಣದೊಳರ್ಜುನ ಬಲ್ಲ
ಕಾಗಿನೆಲೆಯಾದಿಕೇಶವನೆಂಬುದನು ೫

## ಹರಿನಾಮದ ಮಹತ್ವ

### ೧೩೯

ಪಾನವ ಮಾಡುವೆನು, ನಾ
ಮನದಣಿಯೆ ನಾಮಾಮೃತವ ಪ

1 ಶಂಖ 2 ಸೂರ್ಯ

ಶ್ರೀನಿವಾಸನ ನಾಮಸುಧಾರಸ
ಏನು ರುಚಿಯೋ ಕಾಣೆ ಜೇನುತುಪ್ಪದಂತೆ ೧

ಸಕ್ಕರೆ ಬೆರೆಸಿದ ಚೊಕ್ಕ ಪಾನಕವನ್ನು
ಮಿಕ್ಕು ಮೀರುತಲಿದೆ ರಕ್ಕಸಾರಿಯ ಧ್ಯಾನ ೨

ಕದಳಿ ಖರ್ಜೂರ ದ್ರಾಕ್ಷಿ ಅತಕೆಯಿಮ್ಮಿಗಿಲಾಗಿ
ಮುದ ಕೊಡುವುದು ಜಿಹ್ವೆಗೊದಗಿದಾಕ್ಷಣ ೩

ಕಾಸಿದ ಕೆನೆವಾಲ ದೂಷಿಸುವಂತಿದೆ
ಏಸು[1]ರುಚಿಯೋ ಹರಿದಾಸರೆ ಬಲ್ಲರು ೪

ಹಯವದನನ ನಿರ್ಭಯದಿಂ ಭಜಿಸಲು
ದಯಮಾಡುವ ಸಾಯುಜ್ಯಪದವಿಯನಿತ್ತು ೫

೧೪೨

ನೀನ್ಯಾಕೋ ನಿನ್ನ ಹಂಗ್ಯಾಕೋ ಪ.
ನಿನ್ನ ನಾಮದ ಬಲವೊಂದಿದ್ದರೆ ಸಾಕೊ ಅ.ಪ.

ಆ ಮರ ಈ ಮರ ಧ್ಯಾನಿಸುತಿರುವಾಗ
ರಾಮ ರಾಮ ಎಂಬ ನಾಮವೆ ಕಾಯ್ತೊ ೧

ಬಾಲೆಯ ಸಭೆಯಲಿ ಸೀರೆಯ ಸೆಳೆವಾಗ
ಬಾಲಕೃಷ್ಣನೆಂಬ ನಾಮವೆ ಕಾಯ್ತೊ ೨

ಯಮನ ದೂತರು ಬಂದು ಅಜಾಮಿಳನೆಳೆವಾಗ
ನಾರಾಯಣನೆಂಬ ನಾಮವೆ ಕಾಯ್ತೊ ೩

1 ಎಷ್ಟು

ಕರಿ ಮಕರಿಗೆ ಸಿಕ್ಕಿ ಮೊರೆಯಿಡುತಿರುವಾಗ
ಆದಿಮೂಲನೆಂಬ ನಾಮವೆ ಕಾಯ್ತೊ ೪

ಪ್ರಹ್ಲಾದನ ಪಿತ ಬಾಧಿಸುತಿರುವಾಗ
ನಾರಸಿಂಹನೆಂಬ ನಾಮವೆ ಕಾಯ್ತೊ ೫

ಹಸುಳೆ ಆ ಧ್ರುವರಾಯ ಅಡವಿಗೆ ಪೋಪಾಗ
ವಾಸುದೇವನೆಂಬ ನಾಮವೆ ಕಾಯ್ತೊ ೬

ನಿಜನಾಮಕೆ ಸರಿಯಾವುದು ಕಾಣೆನೊ
ಘನ್ನ ಮಹಿಮ ಸಿರಿ ಪುರಂದರವಿಠಲ ೭

೧೪೧

ನಾ ಡೊಂಕಾದರೇನೋ ನಿನ್ನ ನಾಮ ಡೊಂಕೆ ವಿಠಲ ಪ.

ನದಿಯು ಡೊಂಕು, ಆದರೇನು, ಉದಕ ಡೊಂಕೆ ವಿಠಲ ೧

ಕಬ್ಬು ಡೊಂಕು, ಆದರೇನು, ಸಿಹಿ ಡೊಂಕೆ ವಿಠಲ ೨

ಪುಷ್ಪ ಡೊಂಕು, ಆದರೇನು ಪರಿಮಳ ಡೊಂಕೆ ವಿಠಲ ೩

ಆಕಳು ಡೊಂಕು, ಆದರೇನು. ಹಾಲು ಡೊಂಕೆ ವಿಠಲ ೪

ಬಿಲ್ಲು ಡೊಂಕು, ಆದರೇನು ಬಾಣ ಡೊಂಕೆ ವಿಠಲ ೫

ನಾನು ಹೊಲೆಯನಾದರೆ ನಿನ್ನ ನಾಮ ಹೊಲೆಯೆ ವಿಠಲ ೬

ಅಜ್ಞನಾದರೇನು ಕಾಯೊ ಸುಜ್ಞ ಪುರಂದರ ವಿಠಲ ೭

೧೪೨

ಹರಿನಾರಾಯಣ ಹರಿ ನಾರಾಯಣ ಎನು ಮನವೆ ಪ.

ನಾರಾಯಣನೆಂಬ ನಾಮದ ಬೀಜವ ನಾರದ ಬಿತ್ತಿದ
ಧರೆಯೊಳಗೆ ಅ.ಪ.

ತರಳಧ್ರುವನಿಂದ ಅಂಕುರಿಸಿತು, ಅದು
ವರ ಪ್ರಹ್ಲಾದನಿಂದ ಮೊಗ್ಗಾಯ್ತು
ಧರಣೀಶ ರುಕುಮಾಂಗದನಿಂದ ಚಿಗುರಿತು
ಕುರುಪಿತಾಮಹನಿಂದ ಹೂವಾಯ್ತು ೧

ವಿಜಯನ ಸತಿಯಿಂದ ಕಾಯಾಯಿತು, ಅದು
ಗಜೇಂದ್ರನಿಂದ ದೋರೆ ಹಣ್ಣಾಯ್ತು
ನಿಜ ಶುಕಮುನಿಯಿಂದ ಪರಿಪಕ್ವವಾಯಿತು
ಅಜಾಮಿಳ ತಾನುಂಡು ರಸಸವಿದ ೨

ಕಾಮಿತ ಫಲವೀವ ನಾಮವೊಂದಿರಲಾಗಿ
ಹೋಮ ನೇಮ ಜಪವೇಕೆ
ಸ್ವಾಮಿ ಶ್ರೀ ಪುರಂದರವಿಠಲನ ನಾಮವ
ನೇಮದಿಂದ ನೀ ನೆನೆ ಮನವೆ ೩

೧೪೩

ಹರಿನಾಮದರಗಿಣಿಯು ಹಾರುತಿದೆ ಜಗದಿ
ಪರಮ ಭಾಗವತರು ಬಲೆಯ ಬೀಸುವರು ಪ.

ಕೋಪವೆಂಬ ಮಾರ್ಜಾಲ[1] ಕಂಡರೆ ನುಂಗುವುದು
ತಾಪವೆಂಬ ಹುಲಿಯು ಕೊಂಡೊಯ್ವುದು
ಕಾಪಾಡಲದನೊಯ್ದು ಹೃದಯದೊಳಗಿಂಬಿಟ್ಟು
ಆಪತ್ತಿಗೊದಗುವುದು ಆ ಮುದ್ದು ಅರಗಿಣಿಯು ೧

ದಾರಿಯೊಳು ನಡೆವಾಗ ಚೋರರುಪಟಳವಿಲ್ಲ
ಮಾರಿ ಬಂದರೆ ಅದನು ಹೊಡೆದು ನೂಕುವುದು
ಕ್ರೂರ ಯಮಭಟರನ್ನು ಮೂಗು ಕಿಕ್ಕಿರಿ ಬಡಿದು
ದಾರಿ ತೋರುವುದು ಮುರಾರಿ ಪಟ್ಟಣಕೆ ೨

ಎಷ್ಟು ವರ್ಣಿಸಲಿ ನಾ ಈ ಮುದ್ದು ಅರಗಿಣಿಯ
ಹೊಟ್ಟೆಯೊಳಗೀರೇಳು[2] ಜಗವನಿಂಬಿಟ್ಟು
ಸೃಷ್ಟೀಶ ಪುರಂದರವಿಠಲನ ನೆನೆ ನೆನೆದು
ಮುಟ್ಟಿ ಭಜಿಸುವುದು ನೀವೀ ಮುದ್ದು ಅರಗಿಣಿಯ ೩

೧೪೩೭

ರಾಮನಾಮ ಪಾಯಸಕ್ಕೆ ಕೃಷ್ಣನಾಮ ಸಕ್ಕರೆ ಪ.

ವಿಠಲನಾಮ ತುಪ್ಪವ ಬೆರೆಸಿ ಬಾಯಿ ಚಪ್ಪರಿಸಿರೊ ಅ.ಪ.

ಒಮ್ಮನ ಗೋಧಿಯ ತಂದು, ವೈರಾಗ್ಯ ಕಲ್ಲಲಿ ಬೀಸಿ
ಸುಮ್ಮನ ಸಜ್ಜಿಗೆ ತೆಗೆದು, ಸಣ್ಣ ಸಜ್ಜಿಗೆ ಮಾಡಿರೊ ೧

ಹೃದಯವೆಂಬೊ ಪಾತ್ರೆಯೊಳಗೆ ಭಾವವೆಂಬೊ ಎಸರು[3] ಇಟ್ಟು
ಬುದ್ಧಿಯೆಂಬೊ ಪಕ್ವವ ಮಾಡಿ ಹರಿವಾಣ[4]ದೊಳಗೆ ನೀಡಿ ೨

ಆನಂದ ಆನಂದವೆಂಬೊ ತೇಗು ಬಂದಾವು ಎರಡು
ಆನಂದಮೂರುತಿ ನಮ್ಮ ಪುರಂದರವಿಠಲನ ನೆನೆಯಿರೊ ೩

---

1 ಬೆಕ್ಕು 2 ಹದಿನಾಲ್ಕು 3 ನೀರು 4 ತಟ್ಟೆ

೧೪೩ಬಿ

ಕಲ್ಲು ಸಕ್ಕರೆ ಕೊಳ್ಳಿರೋ ನೀವೆಲ್ಲರು, ಕಲ್ಲು ಸಕ್ಕರೆ
ಕೊಳ್ಳಿರೋ ಪ.

ಕಲ್ಲು ಸಕ್ಕರೆ ಸವಿ ಬಲ್ಲವರೆ ಬಲ್ಲರು, ಫುಲ್ಲಲೋಚನ ಶ್ರೀಕೃಷ್ಣ
ನಾಮವೆಂಬ ಅ.ಪ.

ಎತ್ತು ಹೇರುಗಳಿಂದ ಹೊತ್ತುಮಾರುವುದಲ್ಲ
ಒತ್ತೊತ್ತಿ ಗೋಣಿಯೊಳ್ ತುಂಬುವುದಲ್ಲ
ಎತ್ತ ಹೋದರು ಬಾಡಿಗೆ ಸುಂಕವಿದಕಿಲ್ಲ
ಉತ್ತಮ ಸರಕಿದು ಅತಿಲಾಭ ಬರುವಂಥ ೧

ನಷ್ಟ ಬೀಳುವುದಲ್ಲ ನಾತ ಹುಟ್ಟುವುದಲ್ಲ
ಎಷ್ಟು ಒಯ್ದರು ಬೆಲೆ ರೊಕ್ಕವಿದಕಿಲ್ಲ
ಕಟ್ಟಿರುವೆಯು ತಿಂದು ಕಡಮೆಯಾಗುವುದಲ್ಲ
ಪಟ್ಟಣದೊಳಗೆ ಪ್ರಸಿದ್ಧವಾಗಿರುವಂಥ ೨

ಸಂತೆ ಸಂತೆಗೆ ಹೋಗಿ ಶ್ರಮಪಡಿಸುವುದಲ್ಲ
ಸಂತೆಯೊಳಗೆ ಇಟ್ಟು ಮಾರುವುದಲ್ಲ
ಸಂತತ ಭಕ್ತರ ನಾಲಗೆ ಸವಿಗೊಂಬ
ಕಾಂತ ಪುರಂದರವಿಠಲ ನಾಮವೆಂಬ ೩

೧೪೪

## ಉಗಾಭೋಗಗಳು

ಬಲಿಯ ಮನೆಗೆ ವಾಮನ ಬಂದಂತೆ
ಭಗೀರಥಗೆ ಶ್ರೀಗಂಗೆ ಬಂದಂತೆ
ಮುಚುಕುಂದಗೆ ಶ್ರೀಮುಕುಂದ ಬಂದಂತೆ

ವಿದುರನ ಮನೆಗೆ ಶ್ರೀಕೃಷ್ಣ ಬಂದಂತೆ
ವಿಭೀಷಣನ ಮನೆಗೆ ಶ್ರೀರಾಮ ಬಂದಂತೆ
ನಿನ್ನ ನಾಮವು ಬಂದು ಎನ್ನ ನಾಲಗೆಯಲಿ
ನಿಂದು ಸಲಹಲಿ ಶ್ರೀಪುರಂದರವಿಠಲ

* * * *

ಬೆಟ್ಟದಂತ ದುರಿತವು ಸುತ್ತಮುತ್ತಲೊಟ್ಟಿರೆ
ಕೃಷ್ಣನಾಮದ ಕಿಡಿ ಬಿದ್ದು ಬೆಂದು ಹೋದದ್ದು ಕಂಡೆ
ಎಲೆ ಎಲೆ ದುರಿತವೆ ತಿರುಗಿ ನೋಡದೆ ಹೋಗು
ಎಲೆ ಎಲೆ ದುರಿತವೆ ಮರಳಿ ನೋಡದೆ ಹೋಗು
ನಿನ್ನ ಕಂಡರೆ ಶಿಕ್ಷಿಸದೆ ಬಿಡ
ಇನ್ನೊಮ್ಮೆ ಕಂಡರೆ ಶಿರವ ಚೆಂಡಾಡುವನು
ಪುಂಡರೀಕಾಕ್ಷ ನಮ್ಮ ಪುರಂದರವಿಠಲ

* * * *

ಅಪಾಯ ಕೋಟಿ ಕೋಟಿಗಳಿಗೆ ಉಪಾಯವೊಂದೆ
ಉಪಾಯವೊಂದೆ ಹರಿಭಕ್ತರು ತೋರಿಕೊಟ್ಟ ಉಪಾಯ ಒಂದೆ
ಪುರಂದರವಿಠಲನೆಂದು ಭೋರಿಟ್ಟು ಕರೆವ ಉಪಾಯವೊಂದೆ

೧೪೫

ನಾರಾಯಣ ನಿನ್ನ ನಾಮ ಒಂದಿರುತಿರೆ
ಬೇರೊಂದು ನಾಮವಿನ್ನಾಕಯ್ಯ ಪ.

ನೆಟ್ಟನೆ ದಾರಿಯು ಬಟ್ಟೆ[1]ಯೊಳಿರುತಿರೆ
ಬೆಟ್ಟವ ಬಳಸಲಿನ್ಯಾಕಯ್ಯ
ಅಷ್ಟೈಶ್ವರ್ಯವು ಮೃಷ್ಟಾನ್ನವಿರುತಿರೆ
ಬಿಟ್ಟಿ ಕೂಳನು ತಿನ್ನಲ್ಯಾಕಯ್ಯ ೧

ಪರುಷ[2]ದ ಪಾಳಿ[3]ಗಳಿರುತಿರೆ ಬೀದಿ
ಜರಿಗಲ್ಲ[4] ತೊಳೆಯಲಿನ್ಯಾಕಯ್ಯ
ಹರಿವಾಣದೊಳಗಮೃತಾನ್ನವು ಇರುತಿರೆ
ತಿರುಪೆ ಕೂಳನು ತಿನ್ನಲ್ಯಾಕಯ್ಯ ೨

ಬೆಲ್ಲವು ಕರದೊಳಗಿರುತಿರೆ ಕಾಡ
ಕಲ್ಲನು ಕಡಿಯಲಿನ್ಯಾಕಯ್ಯ
ಒಲ್ಲಿದ ನೆಲೆಯಾದಿಕೇಶವನಿರುತಿರೆ
ಚಿಲ್ಲರೆ ದೈವದ ಹಂಬಲ್ಯಾಕಯ್ಯ ೩

೧೪೬

ಹರಿನಾಮ ಘೋಷ ಪ.

ಎಲ್ಲಿ ಶ್ರೀಹರಿನಾಮ ಘೋಷ
ಅಲ್ಲಿ ಸಕಲ ಸುಖ ಸಂತೋಷ
ಸುಲಭಫಲಹೇದು ಭವಭಯದ ನಾಶ
ಹರಿನಾಮ ಘೋಷ ೧

---

1 ಹಾದಿ 2 ಸ್ಪರ್ಶಶಿಲೆ 3 ಹಾಳಿ(?) = ಹಲಗೆ 4 ಪುಡಿಗಲ್ಲು

ಹರಿಸುವುದಾನಂದ ಹರುಷ
ಹರಿಸುವುದು ಕಲಿಮಲ ಕಲುಷ
ತ್ವರಿತೋಡಿಸುವುದು ಪಾತಕ ದೋಷ
ಹರಿನಾಮ ಘೋಷ ೨

ಸ್ವಹಿತ ಸಾಧನದ ಸು ಉಪದೇಶ
ಬಾಹ್ಯಾಂತರ[1]ದೋರುವ ಪ್ರಕಾಶ
ಮಹಿಪತಿಗಿದೆ ನಿತ್ಯದುಲ್ಲಾಸ
ಹರಿನಾಮ ಘೋಷ ೩

೧೪೭

ತೊಟ್ಟಿಲೊಳಗೆ ಇಪ್ಪ ಶಿಶುವಿನ ಮೊಗ ನೋಡಿ
ತುಷ್ಟಳಾಗಿ ಜನನಿ ತೆಗೆದೆತ್ತಿ ಮೊಲೆಯ
ಕೊಟ್ಟು ಸಂತೈಸುವ ತೆರದಲ್ಲಿ ಎನಗೆ
ವಿಠಲ ವಿಠಲನೆಂಬ ಜನನಿ ಇರಲಿಕ್ಕೆ
ಕಷ್ಟಪಡುವುದ್ಯಾಕೆ ಕಂಡದ್ದು ಹಂಬಲಿಸಿ
ಇಷ್ಟಮೂರುತಿ ರಂಗ ವಿಜಯ ವಿಠಲರೇಯನ
ಪಟ್ಟಣ ಸೇರುವುದು ಒಂದೇ ನಾಮದಿಂದ

o o o

ನಾಮವೆ ಕಾಯುವುದು ನಾಮವೆ ಉಳಿಪುದು
ನಾಮವೆ ಸರ್ವಪವಿತ್ರ ಮಾಡುವುದು
ನಾಮವೆ ಘನ ದುರಿತ ಸಂಹಾರ ಮಾಡುವುದು
ನಾಮವೆ ನೆನೆವಂಗೆ ವಜ್ರಾಂಗಿಯಪ್ಪುದು

1 ಹೊರಗೆ ಮತ್ತು ಒಳಗೆ

ನಾಮವೆ ಸಕಲ ಭಕ್ತಸ್ತೋಮವ ಪಾಲಿಸಿತು
ನಾಮವೆ ನಿಂದಲ್ಲಿ ಕುಳಿತಲ್ಲಿ ಮಹಾಭಾಗ್ಯ
ನಾಮವೊಂದು ನೆನೆಯೆ ವಿಜಯವಿಠಲನ
ಧಾಮವೆ ಆಗುವುದು ತಡೆಯದೆ ನಮಗೆಲ್ಲ

('ಸುಳಾದಿ'ಯಿಂದ)

## ಹರಿದಾಸರ ಹಿರಿಮೆ

### ೧೪೮

ನಿನ್ನಿಂದ ನಿನ್ನ ದಾಸರೆ ಮಿಗಿಲೋ[1] ಕೃಷ್ಣ ಪ.

ನಿನ್ನಿಂದ ನಿನ್ನ ದಾಸರ ಮಿಗಿಲಾಗಿ
ಮನ್ನಿಸುವುದು ನಿನಗೇನು ಪ್ರಿಯವೊ ರಂಗ ಅ.ಪ.

ತನ್ನ ಸತ್ಯಕಾಗಿ ಸತ್ಯಕಾಮನೆಂಬ
ನಿನ್ನ ಪ್ರತಿಜ್ಞೆಯ ಬಿಡಿಸನೆ ಭೀಷ್ಮನು ೧

ಮೂಲೋಕ ಪತಿಯೆಂಬ ನಿನ್ನ, ಧರ್ಮರಾಯ
ಕಾಲು ತೊಳೆವ ಕೀಳು ಊಳಿಗ[2]ಕ್ಕಿಕ್ಕನೆ ೨

ದೇವರಥಾಯೂಥ ಪತಿಯೆಂಬ ನಿನ್ನನು
ಬೋವನ[3] ಮಾಡನೆ ಪಾರ್ಥನು ಬಂಡಿಯ ೩

ಬೊಮ್ಮಾದಿಗಳಿಗಗಮ್ಯಾಗೋಚರ ಪರ
ಬ್ರಹ್ಮ ನಿನ್ನನು ಬಲಿ ಬಾಗಿಲ ಕಾಯ್ಸನೆ ೪

ಶ್ರೀಪತಿ ಭೂಪತಿ ಈ ಪೆಸರಿರಲು
ಗೋಪಾಂಗನೆಯರ ನೀ ಕೂಡಿದೆಯೋ ಕೃಷ್ಣ ೫

---

1 ಹೆಚ್ಚು 2 ಕೆಲಸ 3 ಸಾರಥಿ

೧೪೯

ಏನು ಸುಖವೊ, ಎಂಥಾ ಸುಖವೊ ಹರಿಯ
ಧ್ಯಾನ ಮಾಡುವರ ಸಂಗ ಪ.

ತಂಬೂರಿ ಮೀಟುತ ವ್ವಯ ಅಂಬಕ[1]ದಿ ಬಾಷ್ಪ ಬಿಂದು
ತುಂಬಿ ಆನಂದದಿಂದ ಸಂಭ್ರಮವಾಗಿಪರ ಸಂಗ ೧

ಗೆಜ್ಜೆಯ ಕಾಲಲ್ಲಿ ಕಟ್ಟಿ ಲಜ್ಜೆ ಬಿಟ್ಟು ಹರಿಯ ನಾಮ
ಗರ್ಜನೆ ಮಾಡುತ್ತ ಅಘ[2]ವರ್ಜಿತರಾಗಿಪ್ಪರ ಸಂಗ ೨

ಪುಷ್ಪದಿ ಸುಗಂಧ ಹ್ಯಾಗೆ ಇಪ್ಪುದೊ ತದ್ವತು ಜಗ
ದಪ್ಪ ಬ್ರಹ್ಮಾದಿಗಳೊಳಗಿಪ್ಪನೆನ್ನುವರ ಸಂಗ ೩

ತುಚ್ಛ ವಿಷಯವ ತೊರೆದು ನಿಶ್ಚಲ ಭಕುತಿಯಿಂದ
ಅಚ್ಯುತಾನಂತನ ಪಾದ ಮೆಚ್ಚಿಸಿದವರ ಸಂಗ ೪

ದರ್ವಿ[3]ಯಂತೆ ಜೀವವನ್ನು ಸರ್ವತ್ರ ತಿಳಿದು ಶೇಷ
ಪರ್ವತವಾಸನ ಕಂಡು ಉರ್ವಿ[4]ಯೊಳಿಹರ ಸಂಗ ೫

ನಡೆವುದು ನುಡಿವುದು ಕೊಡುವುದು ಕೊಂಬುವುದು
ಒಡೆಯನ ಪ್ರೇರಣೆಯೆಂದು ನುಡಿದು ಹಿಗ್ಗುವರ ಸಂಗ ೬

ಸೃಷ್ಟಿಗೊಡೆಯನ ಮನವಿಟ್ಟು ಭಜಿಸುತ ಜ್ಞಾನ
ಶಿಷ್ಟರಾಗಿ ಸಿರಿಕೃಷ್ಣಗಿಷ್ಟರಾಗಿಪ್ಪರ ಸಂಗ ೭

೧೫೦

ನೋಡಿರೈ ಕಲ್ಪಭೂರುಹರ[5] ಪ.
ನಾಡೊಳಗಚ್ಯುತನ ದಾಸರು ನರರೇ ಅ.ಪ.

---

1 ಕಣ್ಣು 2 ಪಾಪ 3 ಹಾವಿನ ಹೆಡೆ(?) 4 ಲೋಕ 5 ಕಲ್ಪವೃಕ್ಷ

ಕ್ಷೀರ[1]ಕೂಡಿದ ಜಲವ ನೀರೆನ್ನಬಹುದೆ
ನೀರೊಳುದಿಸಿದ ಮುತ್ತು ನೀರಾಗೋದೆ
ಆರಿದ ಭಾಂಡ[2] ಮೃತ್ತಿಕೆ[3] ಕೂಡಲರಿವುದೆ
ಶೌರಿಯ ಶರಣರ ನರರೆನ್ನಬಹುದೆ ೧

ಹರಿಗೆರೆದ ನೀರು ತೀರ್ಥವೆನಿಸಿತು, ನರ
ಹರಿವುಂಡ ಚರು[4]ವು ಪ್ರಸಾದವಾಯ್ತು
ಹರಿದಾಸರುಗಳೆಂಬ ನಾಮಧಾರಕರನ್ನು
ನರರೆನ್ನಬಹುದೇನೋ ಸುರರಿಗಧಿಕರನ್ನು ೨

ಪರಬ್ರಹ್ಮ ವಿಷ್ಣುವು ಚರಬ್ರಹ್ಮ ವೈಷ್ಣವ
ಪರಿಕಿಸಲರಿಯರು ಮತಿಭ್ರಷ್ಟರು
ಧರೆಯೊಳು ಪುರಂದರವಿಠಲನ ದಾಸರ
ನರರೆಂದವಗೆ ಘೋರ ರೌರವ ನರಕ ೩

೧೫೧

## ಉಗಾಭೋಗಗಳು

ದರಿದ್ರರೆನ್ನಬಹುದೆ ಹರಿದಾಸರ
ಸಿರಿವಂತರೆನ್ನಬಹುದೆ ಹರಿದ್ರೋಹಿಗಳ
ಹರಿದಾಸರ ಮೇಲಿದ್ದ ಕರುಣವು
ಸಿರಿದೇವಿ ಮೇಲಿಲ್ಲವೋ ಪುರಂದರ
ವಿಠಲನ ಆಳುಗಳಿಗೆ ಎಲ್ಲಿಹುದು
ಮಾನಾಭಿಮಾನ ಜಗದಿ

* * * *

1 ಹಾಲು 2 ಗಡಿಗೆ 3 ಮಣ್ಣು 4 ನೈವೇದ್ಯ, ಹವಿಸ್ಸು

ಮಾರಿಯ ಕೈಯಿಂದ ನೀರ ತರಿಸುವರು
ಮಸಣಿಯ ಕೈಯಿಂದ ಕಸವ ಬಳಿಸುವರು
ಮೃತ್ಯುವಿನ ಕೈಯಿಂದ ಬತ್ತವ ಕುಟ್ಟಿಸುವರು
ಜವನವರ[1] ಕೈಯಿಂದ ಜಂಗುಲಿಯ (ಜಂಗುಳಿ?) ಕಾಯಿಸುವರು
ಪುರಂದರವಿಠಲನ ದಾಸರು ಸರಿಬಂದ ಹಾಗಿಹರು ಭೂಮಿಯ ಮೇಲೆ

* * * *

ತಂಬೂರಿ ಮೀಟಿದವ ಭವಾಬ್ಧಿ[2] ದಾಟಿದವ
ತಾಳವ ತಟ್ಟಿದವ ಸುರರೊಳು ಸೇರಿದವ
ಗೆಜ್ಜೆಯ ಕಟ್ಟಿದವ ಖಳರೆದೆ ಮೆಟ್ಟಿದವ
ಗಾಯನ ಪಾಡಿದವ ಹರಿಮೂರ್ತಿ ನೋಡಿದವ
ಪುರಂದರವಿಠಲನ ನೋಡಿದವ ವೈಕುಂಠಕೋಡಿದವ

೧೫೨

ಭಕುತ ಜನ ಮುಂದೆ ನೀನವರ ಹಿಂದೆ ಪ.

ಯುಕುತಿ ಕೈಗೊಳ್ಳದೊ ಗಯಾ ಗದಾಧರನೆ ಅ.ಪ.

ಕಟ್ಟೆರಡು[3] ಬಿಗಿದು ನದಿ ಸೂಸಿ ಹರಿಯುತ್ತಿರೆ
ಕಟ್ಟಲೆ[4]ಯಲಿ ಹರಿಗೋಲು ಹಾಕಿ
ನೆಟ್ಟನೆ ಆಚೆಗೀಚೆಗೆ ಪೋಗಿ ಬರುವಾಗ
ಹುಟ್ಟು ಮುಂದಲ್ಲದೆ ಹರಿಗೋಲು ಮುಂದೆ? ೧

1 ಯಮದೂತರು 2 ಜನ್ಮಸಮುದ್ರ 3 ಎರಡು ದಡಗಳು 4 ಅಗಲವಾದ ಅಲೆ

ಕಾಳೆ ಹೆಗ್ಗಾಳೆ ದುಂದುಭಿ ಭೇರಿ ತವಟೆ ನಿ
ಸ್ಸಾಳ ನಾನಾವಾದ್ಯ ಘೋಷಣಗಳು
ಸಾಲಾಗಿ ಬಳಿವಿಡಿದು ಸಂಭ್ರಮದಿ ಬರುವಾಗ
ಆಳು ಮುಂದಲ್ಲದೆ ಅರಸು ತಾ ಮುಂದೆ ? ೨

ಉತ್ಸಾಹವಾಹನದಿ ಬೀದಿಯೊಳು ಮೆರೆಯುತಿರೆ
ಸತ್ಸಂಗತಿಗೆ ಹರಿದಾಸರೆಲ್ಲ
ವತ್ಸಲ ಸಿರಿ ವಿಜಯವಿಠಲ ವೆಂಕಟಾಧೀಶ
ವತ್ಸ ಮುಂದಲ್ಲದೆ ಧೇನು ತಾ ಮುಂದೆ ? ೩

೧೫೩

ಎಲ್ಲಿ ಭಯಗಳು ಹರಿಯ ಭಕುತರಿಗೆ ಇಲ್ಲ ಪ.

ಇಲ್ಲವೋ ಕಾಣೋ ಎಂದಿಗಾದರೂ ಮರುಳೆ ಅ.ಪ.

ಹುಲಿ ಇಲಿಯಾಗುವುದು ತೋಳ ಕೋಳ್ಯಾಗುವುದು
ಕಲಿ ಬಂದು ಹಿತ್ತಲನ್ನೀಗ ಬಳಿವ
ಖಳ ಮಹಾಚೋರ ಚೊಚ್ಚಲಗೌಡಿ ಮಗನಾಹ
ಜಲಜಾಕ್ಷನ ಕೃಪೆಯು ಪಡೆದ ದಾಸರಿಗೆ ೧

ಕರಡಿ ಕರುವಾಗುವುದು ಉರಿ ಮಂಜು ಆಗುವುದು
ಕರಿ ನಾಯಾಗುವುದು ಕಂಡವರಿಗೆ
ಭರದಿಂದ ಸುರಿವ ಮಳೆ ನಿಲ್ಲೆನಲು ನಿಲ್ಲುವುದು
ನರಹರಿಯ ನಾಮಗಳ ನಂಬಿ ಭಜಿಪರಿಗೆ ೨

ಫಣಿ ಸರವಿ[1]ಯಾಗುವುದು ದಣಿವಾಗುತಿಹ ಮಾರ್ಗ
ಕ್ಷಣದೊಳಗೆ ಪೋದಂತೆ ಕಾಣಿಸುವುದು
ಘನ ಪಾಷಾಣ[2]ಗಳು ತೃಣಸಮವು ಎನಿಸುವುವು
ವನಜಾಕ್ಷನ ಕೃಪೆಯ ಪಡೆದ ದಾಸರಿಗೆ ೩

ಕ್ಷುಧೆ[3] ತೃಷೆ[4]ಯಾಗದು ಕ್ಷುದ್ರ ಸಂಗವಾಗದು
ಪದೆಪದೆಗೆ ರೋಗಗಳು ಬೆನ್ನಟ್ಟವು
ಉದಯಾಸ್ತಮಾನಂಗಳೆಂಬ ಭಯ ಸುಳಿಯದು
ಪದುಮನಾಭನ ಕೃಪೆಯ ಪಡೆದ ದಾಸರಿಗೆ ೪

ಬಾರವು ಭಯಂಗಳು ಬಂದರೂ ನಿಲ್ಲವು
ಹಾರಿ ಹೋಗುವುವು ದಶದಿಕ್ಕುಗಳಿಗೆ
ಘೋರದುರಿತಾರಿ ಶ್ರೀವಿಜಯವಿಠಲನಂಘ್ರಿ
ಸೇರಿದ ಜನರಿಗೆ ಇನಿತು ಭಯವುಂಟೆ ೫

೧೫೪

ಸಂತರೆ[5] ಭವದೂರರು, ಹಿತಕಾಯರು ಪ.

ಸಂತರ ಸೇವೆ ಶ್ರೀ ಹರಿ ಸೇವೆ ಸಂತರ ಮತವೆ ಹರಿ ಸಮ್ಮತವು
ಸಂತರ ಮತಿಯೇ ಮುಕುತಿಯು ಗತಿಯು ಸಂತರ ಪಾದ
ಚಿಂತನಿಗಾಹ್ಲಾದ ೧

ಸಂತರ ಗಾತ್ರ[6] ಭುವನ ಪವಿತ್ರ, ಸಂತರ ನೋಟ ಪಾಪಗಳೋಟ
ಸಂತರ ವಚನ ಧರ್ಮವಿರಚನ, ಸಂತರ ಸಂಗ ತೋಷ ತರಂಗ ೨

1 ಹುಲ್ಲಿನ ಹಗ್ಗ 2 ಕಲ್ಲು 3 ಹಸಿವು 4 ಬಾಯಾರಿಕೆ 5 ಭಕ್ತರು 6 ಶರೀರ

ಸಂತರಿಂದಹಿಕಾ[1]ಮುಷ್ಮಿಕ[2] ಸೌಖ್ಯ, ಸಂತರ ಅಭಯ
ವಿರತಾವಭಯ[3]
ಸಂತರ ಕಂಡವ ಸುಖನುಂಡವ ಸಂತವಿಯೋಗ ತಮಸಿನ
ಭೋಗ ೩

ಸಂತರ ಭೇದ ವಂಶವಿಚ್ಛೇದ, ಸಂತರ ಪ್ರೀತಿ ಶುಭಪದ
ಪ್ರಾಪ್ತಿ
ಸಂತರ ವಾರ್ತಾsಖಿಳ ಪುರುಷಾರ್ಥ........... ೪

ಸಂತರ ಊರು ಎನ್ನ ತವರೂರು ಸಂತರ ಗತಿಗೋತ್ರರು
ಎನಗಾಗಿ
ಸಂತರ ಪದವನೊಪ್ಪಿದರೊಲಿವ ಸಂತರಿಗರಸ ಪ್ರಸನ್ವೆಂಕಟೇಶ ೫

೧೫೫

ರಂಗ ನಿನ್ನ ಕೊಂಡಾಡುವ ಮಂಗಳಾತ್ಮರ
ಸಂಗ ಸುಖವಿತ್ತು ಕಾಯೊ ಕರುಣಾಸಾಗರ ಪ.

ಅರಿಯರೋ ನೀನಲ್ಲದೆ ಮತ್ತನ್ಯದೈವರ
ಮರೆಯರೋ ನೀ ಮಾಡಿದ ಅನಿಮಿತ್ತೋಪಕಾರ
ತೊರೆ[4]ಯರೋ ನಿನ್ನಂಘ್ರಿಸೇವೆ ಪ್ರತಿವಾಸರ[5]
ಅರಿಯರೋ ಪರತತ್ವವಲ್ಲದೆ ಇತರ ವಿಚಾರ ೧

ಮೂಕ ಬಧಿರ[6]ರಂತಿಪ್ಪರೋ ನೋಳ್ಪ ಜನಕೆ
ಕಾಕು[7] ಯುಕುತಿಗಳನವರು ತಾರರೊ ಮನಕೆ
ಸ್ವೀಕರಿಸರನರ್ಪಿತವೊಂದು ಕಾಲಕೆ
ಆ ಕೈವಲ್ಯ ಭೋಗ ಸುಖ ಅವರಿಗೆ ಬೇಕೆ ೨

---

1 ಲೌಕಿಕ 2 ಪಾರಮಾರ್ಥಿಕ 3 ಮಹಾ ಭೀತಿ 4 ಬಿಡು 5 ಪ್ರತಿನಿತ್ಯ
6 ಕಿವುಡ 7 ಕ್ಷುದ್ರ

ಜಯಾಜಯ ಲಾಭಾಲಾಭ ಮಾನಾಪಮಾನ
ಭಯಾಭಯ ಸುಖದುಃಖ ಲೋಷ್ಟ[1] ಕಾಂಚನ[2]
ಪ್ರಿಯಾಪ್ರಿಯ ನಿಂದಾಸ್ತುತಿಗಳನುದಿನ
ಶ್ರೀಖರಸ ಚಿಂತಿಸುವರೋ ನಿನ್ನ ಅಧೀನ ೩

ಈಶಿತವ್ಯರ[3]ತಿಪ್ಪರೇಕಾಂತ ಭಕ್ತರು
ದೇಶಕಾಲೋಚಿತ ಧರ್ಮಕರ್ಮಾಸಕ್ತರು
ಆಶಾ ಕ್ರೋಧ ಲೋಭ ಮೋಹಪಾಶಮುಕ್ತರು
ಈ ಸುಜನರೇ ಶಾಪಾನುಗ್ರಹಶಕ್ತರು ೪

ಕಂಡಕಂಡಲ್ಲಿ ವಿಶ್ವರೂಪ ಕಾಂಬರು
ಉಂಡು ಉಣಿಸಿದ್ದೆಲ್ಲ ನಿನ್ನ ಯಜ್ಞವೆಂಬರು
ಬಂಡುಣಿ[4]ಯಂದದಿ ನಾಮಾಮೃತವನುಂಬರು
ಹೆಂಡಿರು ಮಕ್ಕಳು ನಿನ್ನ ತೊಂಡರೆಂಬರು ೫

ಬಿಡರು ತಮ್ಮ ಸ್ವಧರ್ಮಗಳೇನು ಬಂದರು
ಪಡರು ದೈನ್ಯ ಒಬ್ಬರಿಗು ಲೋಕವಂದ್ಯರು
ಪಿಡಿಯರು ನಿನ್ನ ದ್ವೇಷಿಗಳಿಂದೇನು ಬಂದರು
ಕೊಡುವರು ಬೇಡಿದಿಷ್ಟಾರ್ಥವ ನಿತ್ಯಾನಂದರು ೬

ನಗುವರೊ ರೋದಿಸು[5]ವರೊ ನಾಟ್ಯವಾಡೋರೊ
ಬಗೆಯರೊ ಬಡತನ ಭಾಗ್ಯ ಭಾಗವತರು
ತೆಗೆಯರೊ ನಿನ್ನಲ್ಲಿ ಮನವೊಮ್ಮೆಯಾದರೂ
ಜಗನ್ನಾಥವಿಠಲ ನಿನ್ನವರೇನು ಧನ್ಯರೋ ೭

---

1 ಕಲ್ಲು 2 ಬಂಗಾರ 3 ಭಕ್ತ, ಜ್ಞಾನಿ. 4 ತುಂಬಿ 5 ಅಳುವುದು

## ೧೫೬

## ಅವತಾರತ್ರಯ

ಹನುಮ ನಮ್ಮ ತಾಯಿ ತಂದೆ, ಭೀಮ ನಮ್ಮ ಬಂಧು ಬಳಗ
ಆನಂದತೀರ್ಥರೇ ನಮ್ಮ ಗತಿಗೋತ್ರವಯ್ಯ ಪ.

ತಾಯಿ ತಂದೆ ಹಸುಳೆಗೆ ಸಹಾಯ ಮಾಡಿ ಸಾಕುವಂತೆ
ಆಯಾಸವಿಲ್ಲದೆ ಸಂಜೀವನವ ತಂದೆ
ಗಾಯಗೊಂಡ ಕಪಿಗಳನ್ನು ಸಾಯದಂತೆ ಪೊರೆದ ರಘು
ರಾಯನಂಘ್ರಿಗಳೆ ಸಾಕ್ಷಿ ತ್ರೇತಾಯುಗದಿ ೧

ಬಂಧು ಬಳಗದಂತೆ ಆಪದ್ಬಾಂಧವನಾಗಿ ಪಾರ್ಥನಿಗೆ
ಬಂದ ಬಂದ ದುರಿತಗಳ ಪರಿಹರಿಸಿ
ಅಂಧಜಾತರ[1]ಕೊಂದು ನಂದಕಂದಾರ್ಪಣೆಂದ ಗೋ-
ವಿಂದನಂಘ್ರಿಗಳೇ ಸಾಕ್ಷಿ ದ್ವಾಪರಯುಗದಿ ೨

ಗತಿಗೋತ್ರರಂತೆ ಸಾಧುತತಿಗಳಿಗೆ ಮತಿಯ ತೋರಿ
ಮತಿಗೆಟ್ಟ ಇಪ್ಪತ್ತೊಂದು ಮತವ ಖಂಡಿಸಿ
ಗತಿಗೆಟ್ಟ ಸದ್ವೈಷ್ಣವರಿಗೆ ಸದ್ಗತಿಯ ತೋರಿದೆ ಪರಮಾತ್ಮ
ಗತಿ ಪುರಂದರವಿಠಲನೆ ಸಾಕ್ಷಿ ಕಲಿಯುಗದಲ್ಲಿ

## ೧೫೭

## ದ್ವೈತ ತತ್ವ

ಎರಡೂ ಒಂದಾಗದು ರಂಗ ಪ.
ಎರಡೂ ಒಂದಾಗದು ಎಂದೆಂದಿಗು ರಂಗ ಅ.ಪ.

---

1 ಕೌರವರು

ಒಂದು ವೃಕ್ಷದಲ್ಲಿ ಎರಡು ಪಕ್ಷಿಗಳಂ
ಒಂದೆ ಗೂಡಿನಲ್ಲಿ ಇರುತಿಹವು
ಒಂದು ಪಕ್ಷಿ ಫಲಗಳನುಂಬುದು ಮ
ತ್ತೊಂದು ಫಲಂಗಳನುಣ್ಣದು ರಂಗ ೧

ಹಲವು ಕೊಂಬೆಗೆ ಒಂದು ಹಾರಿತು, ಒಂದು
ಹಲವು ಕೊಂಬೆಗೆ ಹಾರಲರಿಯದು
ಹಲವನೆಲ್ಲ ಒಂದು ಬಲ್ಲುದು, ಒಂದು
ಹಲವನೆಲ್ಲವ ಅರಿಯದು ರಂಗ

ನೂರೆಂಟು ಕೊಂಬೆಗೆ ಹಾರಿತು, ಅದು
ಹಾರಿ ಮೇಲಕ್ಕೇರಿ ವಿಹಾರಿತು
ಮೀರಿ ಪುರಂದರವಿಠಲ ನಿಮ್ಮನು
ಸೇರಿ ಸುಖಿಯಾಗಿ ನಿಂತಿತು ರಂಗ ೩

೧೫೮

ಹರಿದಿನ[1] ಪಾತಕಪರಿಹರ ಪ.

ದುರಿತಾರಿ ಕರುಣಕ್ಕೆ ಕಾರಣ ಮನುಜ ಅ.ಪ.

ಗಂಗೆ ಮೊದಲಾದ ತೀರ್ಥಂಗಳೆಣೆಯೆ–ಶ್ರೀ
ರಂಗ ಮೊದಲಾದ ಕ್ಷೇತ್ರವು ಸರಿಯೆ–ಉ
ತ್ತುಂಗ[2] ಜಪ ತಪ ಹೋಮಗಳಿದಿರೆ–ಭು
ಜಂಗಶಾಯಿದಿನದೊಂದುಪವಾಸಕ್ಕೆ ೧

---

1 ಏಕಾದಶಿ 2 ಶ್ರೇಷ್ಠ

ಹಿಂದೆ ಮಾಡಿದ ಪಾತಕ ನಾಶವು
ಇಂದು ಮಾಡುವ ಸುಕೃತಕ್ಕೆ ಬೆಳಸು
ಮುಂದಣ ಮುಕುತಿಗೆ ಕಲ್ಪಲತೆಯು
ಇಂದಿರೇಶನ ದಿನದಿ ಉಪವಾಸವು ೨

ರುಕುಮಾಂಗದ ಮೊದಲಾದ ಭಕುತರೆಲ್ಲ
ಸಕಲವು ಬಿಟ್ಟು ಏಕಾದಶಿಯ
ಭಕುತಿಯಿಂದಲಿ ಮಾಡಿ ಶ್ರೀಕೃಷ್ಣನ ಮೆಚ್ಚಿಸಿ
ಮುಕುತಿಯ ಸೂರೆಗೊಂಡುದನರಿಯಾ ೩

೧೫೯

ಉಗಾಭೋಗ

ನವರತ್ನಗಳು ಕಂಡ ಕಂಡ ಠಾವಿನಲ್ಲುಂಟೆ
ನವವಿಧ ಭಕುತಿಗಳು[1] ಕಂಡ ಕಂಡಲ್ಲುಂಟೆ
ದೇವ ನಿನ್ನ ಭಕುತಿ ಕಂಡರೆ ಬಾರದು, ಕಲಿತರೆ ಬಾರದು
ಪುರಂದರವಿಠಲ ನಿನ್ನ ದಯವಾಗದನಕ

೧೬೦

ದ್ವೈತ ಸಿದ್ಧಾಂತ ಸಾರ

ಸತ್ಯಂ ಜಗತಿದು ಪಂಚಭೇದವು ನಿತ್ಯ ಶ್ರೀಗೋವಿಂದನ
ಕೃತ್ಯವರಿತು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ ಪ.

---

1 ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ.

[a]ಜೀವ ಈಶಗೆ ಭೇದ ಸರ್ವತ್ರ, ಜೀವ ಜೀವಕೆ ಭೇದವು
ಜೀವ ಜಡಕೆ ಜಡ-ಜಡಕೆ ಭೇದ, ಜೀವ-ಜಡ ಪರಮಾತ್ಮಗೆ॥ ೧

[b]ಮಾನುಷೋತ್ತಮರಿಗಧಿಕ ಕ್ಷಿತಿಪರು ಮನುಜ ದೇವ ಗಂಧರ್ವರು
ಜ್ಞಾನಿ ಪಿತೃಜನ ಕರ್ಮಜ ದಾನವಾರಿ ತತ್ತ್ವಾತ್ಮರು ೨

ಗಣಪ ಮಿತ್ರನು ಸಪ್ತ ಋಷಿಗಳು, ವಹ್ನಿ ನಾರದ ವರುಣನು
ಇನಜಗೆ ಸಮ ಚಂದ್ರ-ಸೂರ್ಯರು, ಮನುಸುತೆಯು ಹೆಚ್ಚು
ಪ್ರವಹನು ೩

ದಕ್ಷ ಸಮ ಅನಿರುದ್ಧ ಶಚಿಗುರು ರತಿಸ್ವಯಂಭುವರಾರ್ವರು
ಪಕ್ಷ ಪ್ರಾಣನಿಗಿಂತ ಕಾಮನು ಕಿಂಚಿದಧಿಕನು ಇಂದ್ರನು ೪

ದೇವ ಇಂದ್ರಗೆ ಅಧಿಕ ಮಹರುದ್ರದೇವ ಸಮ ಶೇಷ-ಗರುಡರು
ಕೇವಲ ರುದ್ರ ಶೇಷ ಗರುಡರಿಗೆ ದೇವಿ ಹೆಚ್ಚು ಸರಸ್ವತಿ ೫

ವಾಯುವಿಗೆ ಸಮರಿಲ್ಲ ಜಗದೊಳು ವಾಯುದೇವರೆ ಬ್ರಹ್ಮರು
ವಾಯು ಬ್ರಹ್ಮಗೆ ಕೋಟಿಗುಣದಿಂದ ಅಧಿಕ ಮಹಿಮಳು ರಮಾ ೬

ಅನಂತ ಗುಣಗಳಿಂದಧಿಕ ಲಕುಮಿಗೆ ಆದಿ ಪುರಂದರವಿಠಲನು
ಘನರು ಸಮರೂ ಇಲ್ಲ ಜಗದೊಳು ಹನುಮ ಹೃತ್ಪದ್ಮವಾಸಿಗೆ ೭

---

a ಪಂಚಭೇದ : i) ಜೀವ-ಈಶ ಭೇದ ii) ಜೀವ-ಜೀವ ಭೇದ iii) ಜೀವ-ಜಡ ಭೇದ iv) ಜಡ-ಜಡ ಭೇದ v) ಜಡ-ಈಶ ಭೇದ

b ಮಾನುಷೋತ್ತಮರಿಂದ ಮೊದಲ್ಗೊಂಡು ಶ್ರೀಹರಿಯವರೆಗೆ ಇರುವ ತಾರತಮ್ಯತತ್ತ್ವವನ್ನು ಆರೋಹಣ ಕ್ರಮದಲ್ಲಿ ನಿರೂಪಿಸಿದೆ. ಒಂದೊಂದು ಹಂತಕ್ಕೂ ಕಕ್ಷ ಎಂಬುದು ಪಾರಿಭಾಷಿಕ ಶಬ್ದ.

## ದೈವಸ್ತುತಿ

### ೧೬೧

### ಉಗಾಭೋಗ

ಸತತ ಗಣನಾಥ ಸಿದ್ಧಿಯನೀವ ಕಾರ್ಯದಲಿ
ಮುಕುತಿಪಥಕೀವ ಮನ ಮಹರುದ್ರದೇವರು
ಭಕುತಿದಾಯಕಳು ಸಿರಿ ಭಾರತೀದೇವಿ
ಯುಕುತಿ ಶಾಸ್ತ್ರಗಳಲ್ಲಿ ವನಜಸಂಭವ[1]ನರಸಿ
ಸತ್ಕರ್ಮಗಳ ನಡೆಸಿ ಸುಜ್ಞಾನಮತಿಯಿತ್ತು
ಪರಿಪಾಲಿಸುವ ನಮ್ಮ ಪವಮಾನನು
ಚಿತ್ತದಲಿ ಆನಂದ ಸುಖವನೀವಳು ರಮಾ
ಭಕುತಜನರೊಡೆಯ ನಮ್ಮ ಪುರಂದರವಿಠಲನು
ಸತತ ಇವರಲಿ ನಿಂತು ಕೃತಿಯ ನಡೆಸುವನು.

### ೧೬೨

ನಮ್ಮಮ್ಮ ಶಾರದೆ ಉಮಾಮಹೇಶ್ವರಿ
ನಿಮ್ಮೊಳಗಿಹನ್ಯಾರಮ್ಮ ಪ

ಕಮ್ಮಗೋಲ[2]ನವೈರಿಸುತನಾದ ಸೊಂಡಿಲ
ಹೆಮ್ಮೆಯ್ಯ ಗಣನಾಥನೆ ಅ.ಪ.

---

1 ಬ್ರಹ್ಮ 2 ಮನ್ಮಥ

ಮೋರೆಕಪ್ಪಿನ ಭಾವ ಮೊರದಗಲ ಕಿವಿ
ಕೋರೆದಾಡೆಯುನ್ಯಾರಮ್ಮ
ಮೂರು ಕಣ್ಣಿನ[1] ಸುತ ಮುರಿದಿಟ್ಟ ಚಂದ್ರನ
ಧೀರ ತಾ ಗಣನಾಥನೆ ಅಮ್ಮಯ್ಯ ೧

ಉಟ್ಟದಟ್ಟಿಯು ಬಿಗಿದುಟ್ಟ ಚಲ್ಲಣ[2]ದ
ದಿಟ್ಟ ತಾನಿವನ್ಯಾರಮ್ಮ
ಪಟ್ಟದ ರಾಣಿ ಪಾರ್ವತಿಯ ಕುಮಾರ
ಹೊಟ್ಟೆಯ ಗಣನಾಥನೆ ಅಮ್ಮಯ್ಯ ೨

ರಾಶಿ ವಿದ್ಯೆಯ ಬಲ್ಲ ರಮಣಿ ಪಂಬಲನೊಲ್ಲ
ಭಾಷಿಗನಿವನ್ಯಾರಮ್ಮ
ಲೇಸಾಗಿ ಸುಜನರ ಸಲಹುವ ನೆಲೆಯಾದಿ
ಕೇಶವನ ದಾಸ ಕಾಣೇ ಅಮ್ಮಯ್ಯ ೩

೧೬೩

ಧವಳ ಗಂಗೆಯ ಗಂಗಾಧರ ಮಹಾಲಿಂಗ ಮಾ
ಧವನ ತೋರಿಸಯ್ಯ ಗುರುಕುಲೋತ್ತುಂಗ ಪ.

ಅರ್ಚಿಸಿದವರಿಗಭೀಷ್ಟವ ಕೊಡುವ
ಹೆಚ್ಚಿನ ಅಘ[3]ಗಳ ಬೇಗನೆ ತರಿವ
ದುಶ್ಚರಿತರನೆಲ್ಲ ದೂರದಲ್ಲಿಡುವ, ನ–
ಮ್ಮಚ್ಯುತಗೊಲ್ಲದ ಅಸುರರ ಬಡಿವ ೧

1 ಈಶ್ವರ 2 ಚಡ್ಡಿ 3 ಪಾಪ

ಮಾರನ ಗೆದ್ದ ಮನೋಹರ ಮೂರ್ತಿ
ಸಾರ ಸಜ್ಜನರಿಗೆ ಸುರಚಕ್ರವರ್ತಿ
ಧಾರುಣಿಯೊಳಗೆ ತುಂಬಿದೆ ನಿನ್ನ ಕೀರ್ತಿ
ಹರಿಯ ತೋರಿಸಯ್ಯ ನಿನಗೆ ಶರಣಾರ್ಥಿ ೨

ಚೆನ್ನ ಪ್ರಸನ್ನ ಶ್ರೀಹಯವದನನ್ನ
ಅನುದಿನ ನೆನೆವಂತೆ ಮಾಡೊ ನೀ ಎನ್ನ
ಅನ್ಯರನರಿಯೆನೊ ಗುರುವೆಂಬೆ ನಿನ್ನ
ಇನ್ನಾದರು ಹರಿಯ ತೋರೋ ಮುಕ್ಕಣ್ಣ ೩

೧೬೪

ಭಾರತಿದೇವಿಯ ನೆನೆ ನೆನೆ
ನಿರುತ ಭಕುತಿಗಿದು ಮನೆ ಮನೆ ಪ.

ಮಾರುತನರ್ಧಾಂಗಿ ಸುಚರಿತ ಕೋಮಲಾಂಗಿ
ಸಾರಸಾ[1]ಕ್ಷಿ ಕೃಪಾಂಗಿ ಅಪಾಂಗಿ[2] ೧

ಕಿಂಕಿಣಿ[3]ಕಿಣಿ ಪಾದ ಪಂಕಜ ನೂಪುರ[4]
ಕಂಕಣ[5] ಕುಂಡಲಾ[6]ಲಂಕೃತ ದೇಹ ೨

ಶಂಕರ ಸುರವರ ವಂದಿತ ಚರಣೆ
ಕಿಂಕರ ಪುರಂದರವಿಠಲನ ಕರುಣೆ ೩

---

1 ತಾವರೆ 2 ಕಡೆಗಣ್ಣ ನೋಟವುಳ್ಳವಳು 3 ಕಿರುಗೆಜ್ಜೆ
4 ಕಾಲಂದುಗೆ 5 ಬಳೆ 6 ಕಿವಿಯ ಆಭರಣ

೧೬೫

ವಂದಿಪೆನಮ್ಮ ಮುದ್ದು ಶಾರದೆ ಶರ
ಚಂದಿರ[1]ವದನೆ ಶಾರದೆ ಪ.

ಇಂದೀವರಾ[2]ಕ್ಷಿ ಶತಾನಂದ[3]ನ ಪ್ರಿಯೆ ದೇವಿ
ಕುಂದು ನೋಡದೆ ಶ್ರುತಿವಂದ್ಯೆ ಜ್ಞಾನವ ನೀಡೆ ಅ ಪ.

ಸಿತಾಬ್ಜಾ[4]ಸನೆ ಸುಖದಾಯಕೀ, ಸುರ
ನಾಥಾರಾಧಿತೆ ವಿಶ್ವನಾಯಕೀ
ವೀತದುರಿತೆ ಶಿವಮಾತೆ ಸದ್ಗುಣಮಣಿ
ವ್ರಾತೆ ವೇದೋಪನಿಷದ್ಗೀತೆ ವಾಗ್ದೇವಿ ಮಾತೆ ೧

ಕೋಕಿಲವಾಣಿ ಕವಿಸೇವಿತೆ ಎನ್ನ
ವಾಕು ಲಾಲಿಸೆ ಮುನಿವಂದಿತೆ
ತೋಕ[5]ನೆಂದು ಸುವಿವೇಕ ಬುದ್ಧಿಯನಿತ್ತು
ಸಾಕು ಸಜ್ಜನರನ್ನು ವಾಕು ಮನ್ನಿಸು ತಾಯೆ ೨

ಪಾತಕಿಗಳೊಡನಾಡಿ ನಾ ನಿನ್ನ
ಪೂತಾ[6]ಬ್ಜಪದ ಭಜಿಸದ್ಹೋದೆ ನಾ
ಪಾತಕವೆಣಿಸದೆ ಸೀತಾರಮಣ ಜಗ
ನ್ನಾಥವಿಠಲನಂಘ್ರಿ ಗೀತಾಮೃತವನುಣಿಸು ೩

---

1 ಶರತ್ಕಾಲದ ಚಂದ್ರ 2 ತಾವರೆ 3 ಬ್ರಹ್ಮ 4 ಬಿಳಿಯ ತಾವರೆ
5 ಎಳೆಯ ಮಗು 6 ಪವಿತ್ರ

೧೬೬

ಜಾಣ ನೀನಹುದೊ ಗುರು ಮುಖ್ಯ ಪ್ರಾಣ ನೀನಹುದೊ ಪ.

ರಾಣಿ ಭಾರತೀರಮಣ ನಿನಗೆಣೆ
ಕಾಣೆ ತ್ರಿಭುವನದೊಳಗೆ, ಸರ್ವ
ಪ್ರಾಣಿಗಳ ಹೃದಯದಲಿ ಮುಖ್ಯ
ಪ್ರಾಣನೆಂದೆನಿಸಿದೆಯೊ ದಿಟ್ಟ ಅ.ಪ.

ಧೀರ ನೀನಹುದೊ ವಾಯುಕುಮಾರ ನೀನಹುದೊ

ಸಾರಿದವರ ಮನೋರಥಂಗಳ
ಬಾರಿ ಬಾರಿಗೆ ಕೊಡುವೆನೆನುತಲಿ
ಕ್ಷೀರನದಿ ತೀರದಲಿ ನೆಲೆಸಿಹ
ಮಾರುತಾವತಾರ ಹನುಮ ೧

ದಿಟ್ಟ ನೀನಹುದೊ ಬೆಟ್ಟವ ತಂದಿಟ್ಟವ ನೀನಹುದೊ

ರೆಟ್ಟೆ ಹಿಡಿದಕ್ಷಯಕುಮಾರನ
ಕುಟ್ಟಿ ದೈತ್ಯರಲಿ ಕೆಡಹಿ ಬೇಗದಿ
ಸುಟ್ಟು ಲಂಕೆಯ ಸೀತೆಗುಂಗುರ
ಕೊಟ್ಟೆ ಜಗಜಟ್ಟಿ ಹನುಮ ೨

ಚಂಡ ನೀನಹುದೊ ದುರಿತಮಾರ್ತಾಂಡ ನೀನಹುದೊ

ಕುಂಡಲ ಕಿರುಘಂಟೆ ಉಡಿಯಲಿ
ಪೆಂಡೆ[1] ನೂಪುರ ಕಾಲಲಂದುಗೆ
ತಂಡ ತಂಡದಿ ಕೃಷ್ಣನಂಘ್ರಿ
ಪುಂಡರೀಕಕೆ ಕೈಯ ಮುಗಿದ ೩

---

1 ಬಳೆ

## ೧೬೭

ಏನು ಧನ್ಯಳೋ ಲಕುಮಿ ಎಂಥಾ ಮಾನ್ಯಳೋ ಪ.
ಸಾನುರಾಗ[1]ದಿಂದ ಹರಿಯ ತಾನೆ ಸೇವೆ ಮಾಡುತಿಹಳು ಅ.ಪ.

ಕೋಟಿ ಕೋಟಿ ಭೃತ್ಯ[2]ರಿರಲು ಹಾಟಕಾ[3]ಂಬರನ ಸೇವೆ
ಸಾಟಿ[4]ಯಿಲ್ಲದೆ ಪೂರ್ಣಗುಣಳು ಶ್ರೇಷ್ಠವಾಗಿ ಮಾಡುತಿಹಳು ೧

ಛತ್ರ ಚಾಮರ ವ್ಯಜನ[5] ಪರ್ಯಂಕ[6] ಪಾತ್ರ ರೂಪದಲ್ಲಿ ನಿಂತು
ಚಿತ್ರ ಚರಿತನಾದ ಹರಿಯ ನಿತ್ಯಸೇವೆ ಮಾಡುತಿಹಳು ೨

ಸರ್ವಸ್ಥಳದಿ ವ್ಯಾಪ್ತನಾದ ಸರ್ವದೋಷರಹಿತನಾದ
ಗರುಡ ಗಮನನಾದ ಪುರಂದರವಿಠಲನ್ನ ಸೇವಿಸುವಳು ೩

## ದಶಾವತಾರ ಸ್ತುತಿ

## ೧೬೮

ಲಕ್ಷ್ಮಿ ರಮಣಗೆ ಮಾಡಿದಳು ಉರುಟಾಣಿ ಪ.
ಇಳೆಯೊಳಗತಿ ಜಾಣೆ ಸುಂದರ ಫಣಿವೇಣಿ ಅ.ಪ.

ಮಚ್ಛ[7] ಕಚ್ಛಪ[8] ಕಿರನೆ[9] ಕೇಸರಿಯಂದದ ಮುಖನೆ
ಸ್ವಚ್ಛ ಮುಖವ ತೋರೈ ಅರಿಸಿನ ಹಚ್ಚುವೆನು ೧

ದುರುಳ ಕ್ಷತ್ರಿಯರನ್ನು ಕೊರಳ ತರಿದ ಹರಿಯೆ
ಹರುಷದಿಂ ಕೊರಳ ತೋರೈ ಗಂಧವ ಹಚ್ಚುವೆನು ೨

ದಶರಥನಲಿ ಜನಿಸಿ ದಶಮುಖನ ಸಂಹರಿಸಿ
ಶಶಿಮುಖಿಯ ತಂದವನೆ ಕುಸುಮವ ಮುಡಿಸುವೆನು ೩

---

1 ಪ್ರೇಮ 2 ಸೇವಕ 3 ಬಂಗಾರ 4 ಸಮಾನ 5 ಬೀಸಣಿಗೆ
6 ಹಾಸುಗೆ 7 ಮತ್ಸ್ಯ 8 ಕೂರ್ಮ, ಆಮೆ 9 ವರಾಹ

ಹದಿನಾರು ಸಾಸಿರ ಸುದತಿಯರನಾಳಿದನೆ
ಪದುಮ ಕರವ ತೋರ್ಯೆ ವೀಳ್ಯವ ಕೊಡುವೆನು ೪

ವಸನರಹಿತನಾಗಿ ವಸುಧೆಯ ತಿರುಗಿದೆ
ಬಿಸಜ[1]ನಾಭನೆ ನಿನಗೆ ವಸನ ಉಡಿಸುವೆನು ೫

ವರತುರಗವನೇರಿ ಕಲಿಯ ಸಂಹರಿಸುವಿ
ಸಿರಿಹಯವದನನೆ ಆರತಿಯೆತ್ತುವೆನು ೬

೧೬೯

ದೇವಿ ನಮ್ಮ ದ್ಯಾವರು ಬಂದರು
ಬನ್ನೀರೆ ನೋಡ ಬನ್ನೀರೆ
ಬನ್ನೀರೆ ನೋಡ ಬನ್ನೀರೆ ನೋಡ
ಬನ್ನೀರೆ ನೋಡ ಬನ್ನೀರೆ ಪ.

ಕೆಂಗಣ್ಣ ಮೀನ[2]ನಾಗಿ ನಮ ರಂಗ
ಗುಂಗಾಡಿ[3] ಸೋಮನ ಕೊಂದಾನ್ಮ್ಯಾ
ಗುಂಗಾಡಿ ಸೋಮನ ಕೊಂದು
ವೇದವ ಬಂಗಾರದೊಡಲಿಗಿ[4]ತ್ತಾನ್ಮ್ಯಾ ೧

ದೊಡ್ಡ ಮಡುವಿನೊಳಗೆ ನಮ ರಂಗ
ಗುಡ್ಡವ ಹೊತ್ತುಕೊಂಡು ನಿಂತಾನ್ಮ್ಯಾ
ಗುಡ್ಡವ ಹೊತ್ತುಕೊಂಡು ನಿಂತು ಸುರರನ್ನು
ದೊಡ್ಡವರನ್ನು ಮಾಡಾನ್ಮ್ಯಾ ೨

---

1 ತಾವರೆ 2 ಮತ್ಸ್ಯಾವತಾರ 3 ಸೊಳ್ಳೆ 4 ಹಿರಣ್ಯಗರ್ಭನಾದ ಬ್ರಹ್ಮ

ಚೆನ್ನ ಕಾಡಿನ ಹಂದಿ[1]ಯಾಗಿ ನಮ್ಮ ರಂಗ
ಚಿನ್ನದ ಕಣ್ಣನ[2]ಕೊಂದ್ಯಾನಮ್ಮ
ಚಿನ್ನದ ಕಣ್ಣನ ಕೊಂದು ಭೂಮಿಯ
ವನ್ನಜಸಂಭವಗಿತ್ತಾನಮ್ಮ ೩

ಸಿಟ್ಟಲಿ ಸಿಂಹನಾಗಿ[3] ನಮ್ಮ ರಂಗ
ಹೊಟ್ಟೆಯ ಕರುಳ ಬಗೆದಾನಮ್ಮ
ಹೊಟ್ಟೆಯ ಕರುಳ ಹಾರವ ಮಾಡಿ
ಪುಟ್ಟಗೆ[4] ವರವ ಕೊಟ್ಟಾನಮ್ಮ ೪

ಹುಡುಗ ಹಾರುವ[5]ನಾಗಿ ನಮ್ಮ ರಂಗ
ಬೆಡಗಿಲಿ ಮುಗಿಲಿಗೆ ಬೆಳೆದಾನಮ್ಮ
ಬೆಡಗಿಲಿ ಮುಗಿಲಿಗೆ ಬೆಳೆದು ಬಲಿಯನ್ನು
ಅಡಿಯಿಂದ ಪಾತಾಳಕ್ಕೊತ್ತಾನಮ್ಮ ೫

ತಾಯ ಮಾತನು ಕೇಳಿ ಸಾಸಿರ ತೋಳಿನ[6]
ಆವಿನ ಕಳ್ಳನ ಕೊಂದಾನಮ್ಮ
ಆವಿನ ಕಳ್ಳನ ಕೊಂದು ಭೂಮಿಯ
ಅವನೀಸುರರಿ[7]ಗಿತ್ತಾನಮ್ಮ ೬

---

1 ವರಹಾವತಾರ 2 ಹಿರಣ್ಯಾಕ್ಷ 3 ನರಸಿಂಹಾವತಾರ 4 ಪ್ರಹ್ಲಾದ
5 ವಾಮನಾವತಾರ 6 ಕಾರ್ತವೀರ್ಯಾರ್ಜುನ 7 ಬ್ರಾಹ್ಮಣರು

ಪಿಂಗಳ[1] ಕಣ್ಣಿನ ಕೊಂಗಗಳ ಕೂಡಿ
ಭಂಗನೆ ಲಂಕೆಗೆ ಪೋದಾನ್ಮಾ॥
ಭಂಗನೆ ಲಂಕೆಗೆ ಪೋಗಿ ನಮ ರಂಗ
ಹೆಂಗಸು ಕಳ್ಳನ[2] ಕೊಂದಾನ್ಮಾ॥ ೭

ಕರಿಯಂ ಹೊಳೆ[3]ಯಲ್ಲಿ ತುರುಗಳ ಕಾಯುತ್ತ
ಉರಗನ ಮಡುವ ಧುಮುಕಾನ್ಮಾ॥
ಉರಗನ ಹೆಡೆ ಮೇಲೆ ಹಾರ್ಹಾರಿ ಕುಣಿವ್ಯಾಗ
ನಾರೇರಿಗೊರವ[4] ಕೊಟ್ಟಾನ್ಮಾ॥ ೮

ಭಂಡನಂದದಿ ಪುಂಡರೀಕಾಕ್ಷನು
ಕಂಡಕಂಡಲ್ಲಿಗೆ ತಿರುಗಾನ್ಮಾ॥
ಕಂಡಕಂಡಲ್ಲಿಗೆ ತಿರುಗಿ ತ್ರಿಪುರರ
ಹೆಂಡಿರನೆಲ್ಲ ಕೆಡಿಸಾನ್ಮಾ॥ ೯

ಚೆಲುವ ಹೆಂಡತಿ ಕುದುರೆಯ ಮ್ಯಾಡಿ
ಒಳ್ಳೆಯ ರಾವುತನಾದನ್ಮಾ॥
ಒಳ್ಳೆಯ ರಾವುತನಾಗಿ ನಮ ರಂಗ
ಡೊಳ್ಳ ಹೊಟ್ಟೆಯ ಮೇಲೊದ್ದಾನ್ಮಾ॥ ೧೦

---

1 ಕೆಂಧಗಣ್ಣು 2 ರಾವಣ 3 ಕಾಳಿಂದಿ ನದಿ 4 ಪ್ರಸಾದ

ಡೋಲಿನ ಮೇಲ್ಕಯ್ಯ ಭರಮಪ್ಪ[1] ಹಾಕ್ಯಾನು
ತಾಳವ ಶಿವನಪ್ಪ ತಟ್ಟ್ಯಾನ್ಯಾ
ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನು
ಚೆಲುವ ಕನಕಪ್ಪ ಕುಣಿದಾನ್ಯಾ ೧೧

## ಯತಿಸ್ತುತಿ

### ೧೭೦

ಶ್ರೀಪಾದರಾಯರ ದಿವ್ಯ ಶ್ರೀಪಾದವ ಭಜಿಸುವೆ ಪ.

ವಾಗ್ವಜ್ರಗಳಿಂದ ಮಾಯಾವಾದಿಗಳೆಲ್ಲರ ಬಾಯ
ಬೀಗವಿಕ್ಕಿ ಮುದ್ರಿಸಿದ ಬಿಂಕಗಳ ಬಿಡಿಸುವ ೧

ವ್ಯಾಸರಾಯರಿಗೆ ವಿದ್ಯಾಭ್ಯಾಸವ ಮಾಡಿಸುವ
ದಾಸರ ನಾಮಗಳಿಂದ ಲೇಸುಲೇಸೆಂದೆನಿಸಿಕೊಂಬ ೨

ಮಧ್ವಮತದಲ್ಲಿ ಪುಟ್ಟಿ ಮಾಯಾವಾದಿಗಳ ಕುಟ್ಟಿ
ಗೆದ್ದು ಮೆರೆದನು ದಿಟ್ಟ ಗುರುರಾಯ ಜಗಜಟ್ಟಿ ೩

ಸುವರ್ಣವರ್ಣ ತೀರ್ಥರ ಸುತ ಶ್ರೀಪಾದರಾಯರ
ಅವರ ನಾಮಗಳಿಂದ ಕಾವನಯ್ಯ ಕರುಣಾನಿಧಿ ೪

ವರದ ವೆಂಕಟೇಶನ್ನ ಒಲಿದು ಪೂಜಿಸುವನ
ಕರುಣದಿಂದ ಹಯವದನ ಸಲಹೋ ಯತಿರನ್ನನ ೫

---

1 ಬ್ರಹ್ಮ...

೧೭೧

ಸಾಸಿರ ಜಿಹ್ವೆ[1]ಗಳುಳ್ಳ ಶೇಷನೆ ಕೊಂಡಾಡಬೇಕು
ವ್ಯಾಸಮುನಿಯು ಸಂನ್ಯಾಸದಿರವ ಪ.

ಆಸೆಯಿಂದ ತಮ್ಮುದರ ಪೋಷಣಕಾಗಿ ಛಪ್ಪನ್ನ[2]
ದೇಶವ ತಿರುಗಿ ಸಂಚಾರ ಮಾಡುತ
ವಾಸಲ ಮಾಡಿ ಬಚ್ಚಿಟ್ಟು ಮಿಂಚುಕೂಳನುಂಡು ದಿನ
ಮೋಸ ಮಾಡಿ ಕಳೆವ ಸಂನ್ಯಾಸಿಗಳು ಸರಿಯೆ ೧

ಕೆರೆ ಬಾವಿ ಪುರ ಅಗ್ರಹಾರಂಗಳ ಮಾಡಿ ಭೂ
ಸುರರೊಂದು ಲಕ್ಷ ಕುಟುಂಬಗಳ
ಪೊರೆವ ವೈಭವ ಕೀರ್ತಿಯಿಂದಲಿ ವ್ಯಾಸರಾ
ಯರ ಗುಣಗಣ ಗಾಂಭೀರ್ಯಾದಿಗಳ ೨

ಹಗಲಿರುಳೆನ್ನದೆ ಆವಾಗ ಶ್ರೀಹರಿಪದಪದ್ಮ
ಯುಗಳವನರ್ಚಿಸಿ ಭಕುತಿಯಿಂದ
ರಘುಪತಿ ಜನಕ ಬ್ರಹ್ಮಣ್ಯತೀರ್ಥರ ಕುವರ
ರಂಗವಿಠಲನನ್ನು ಬಿಡೆಬಿಡೆನು ಎಂಬ ೩

೧೭೨

ವಾದಿರಾಜರೆ ನಿನ್ನ ಪಾದಕ್ಕೆರಗಿ ನಾ
ಮೋದದಿಂ ಬೇಡುವೆ ಮಾಧವನ ತೋರೋ ಪ.

1 ಸಾವಿರ ನಾಲಿಗೆ 2 ಐವತ್ತಾರು

ಸಕಲ ವೇದ ಪುರಾಣ ಶಾಸ್ತ್ರಗಳ
ಪ್ರಕಟಿಸಿದಿ ಕನ್ನಡದಿ ಪ್ರೇಮದಿಂದ
ನಿಖಿಳ ಜನರರಿಯುತಾನಕದುಂದುಭೀ[1]ಸುತನ
ಭಕುತಿಯಂ ಪಡೆದು ಮೇಣ್ ಮುಕುತಿಯೈದಲಿಯೆಂದು ೧

ಗಣನೆಯಿಲ್ಲದೆ ಕೀರ್ತನೆ ಸುಳಾದಿಗಳನ್ನು
ಮನವೊಲಿದು ಮಾಡಿದ್ದು ಜನರು ಪಠಿಸಿ
ವನಜನಾಭನ ಕರುಣವನು ಪಡೆದು ತಾ
ಅನುಭವಿಸಲಿ ಆನಂದವೆನುತಲಿ ೨

ನಿನ್ನ ನೆನೆಯೆ ಧನ್ಯ, ನಿನ್ನ ನೆನೆಯೆ ಮಾನ್ಯ
ನಿನ್ನ ಕೊಂಡಾಡಲು ಪಾಪ ಶೂನ್ಯ
ನಿನ್ನವನೆನೆ ವೇಣುಗೋಪಾಲವಿಠಲ
ಮನ್ನಿಸಿ ಸದ್ಗತಿಯಂ ಪಾಲಿಪ ಮುದದಿ ೩

೧೭೩

ರಾಘವೇಂದ್ರ ಗುರುರಾಯರ ಸೇವಿಸಿರೋ ಸೌಖ್ಯದಿ
ಜೀವಿಸಿರೋ ಪ.

ಕುಂದದೆ ವರಮಂತ್ರಾಲಯದಲ್ಲಿರುವಾ, ಕರೆದಲ್ಲಿಗೆ ಬರುವಾ
ವೃಂದಾವನಗತ ಮೃತ್ತಿಕೆ ಜಲಪಾನಾ, ಮುಕುತಿಗೆ ಸೋಪಾನಾ
ಸಂದರ್ಶನ ಮಾತ್ರದಲಿ ಮಹತ್ಪಾಪಾ ತರಿದೋಡಿಸಲಾಪಾ[2]
ಮಂದಭಾಗ್ಯರಿಗೆ ದೊರೆಯದಿವರ ಸೇವಾ, ಶರಣರ ಸಂಜೀವಾ ೧

1 ವಸುದೇವ 2 ಶಕ್ತ

ಶ್ರೀಸುಧೀಂದ್ರ ಕರಸರೋಜ ಸಂಜಾತಾ, ಜಗದೊಳಗೆ ಪುನೀತಾ
ದಾಶರಥಿಯ ದಾಸತ್ವವ ತಾ ವಹಿಸಿ, ದುರ್ಮತಗಳ ಜಯಿಸಿ
ಈ ಸಮೀರಮತ ಸಂಸ್ಥಾಪಕನಾಗಿ, ನಿಂದಕರನು ನೀಗಿ
ಭೂಸುರರಿಗೆ ಸಂಸೇವ್ಯ ಸದಾಚರಣಿ, ಕಂಗೊಳಿಸುವ ಕರುಣಿ ೨

ಶ್ರೀದವಿಠಲನ ಸನ್ನಿಧಾನ ಪಾತ್ರಾ, ಸಂಸ್ತುತಿಸಲು ಮಾತ್ರಾ
ಮೋದ[1] ಬಡಿಸುತಿಹ ತಾನಿಹಪರದಲ್ಲಿ, ಈತಗೆ ಸರಿಯೆಲ್ಲಿ
ಮೇದಿನಿ[2]ಯೊಳಗಿನ್ನರಸಲು ನಾ ಕಾಣೆ, ಪುಶಿ[3]ಯಲೆನ್ನಾಣೆ
ಪಾದಸ್ಮರಣೆಯನು ಮಾಡದವನೆ ಪಾಪಿ, ನಾ ಪೇಳ್ವೆನು
ಸ್ಥಾಪೀ[4] ೩

## ಹರಿದಾಸ ಸ್ತುತಿ

### ೧೭೪

ದಾಸರೆಂದರೆ ಪುರಂದರದಾಸರಯ್ಯಾ ಪ.

ವಾಸುದೇವ ಕೃಷ್ಣನ್ನ ಸೂಸಿ ಪೂಜಿಸುವ ಅ.ಪ.

ಗ್ರಾಸ[5]ಕಿಲ್ಲದೆ ಪೋಗಿ ಪರರ ಮನೆಗಳ ಪೊಕ್ಕು
ದಾಸನೆಂದು ತುಲಸೀಮಾಲೆ ಧರಿಸಿ
ಬೇಸರಿಲ್ಲದೆ ಅವರ ಕಾಡಿ ಬೇಡಿ ಬಳಲಿಸುತ
ಕಾಸು ಗಳಿಸುವ ಪುರುಷ ಹರಿದಾಸನೇ ೧

ಡಂಭಕದೆ ಹರಿಸ್ಮರಣೆ ಮಾಡಿ ಜನರ ಮುಂದೆ
ಸಂಭ್ರಮದಿ ತಾನುಂಬ ಊಟ ಬಯಸಿ
ಅಂಬುಜೋದ್ಭವ ಪಿತನ ಆಗಮಂಗಳರಿಯದೆ
ತಂಬೂರಿ ಮಿಡಿಟಲವ ಹರಿದಾಸನೇ ೨

1 ಸಂತೋಷ 2 ಭೂಮಿ 3 ಸುಳ್ಳು 4 ಸ್ಥಿರ (?), ಖಂಡಿತ. 5 ಆಹಾರ

ಯಾಯಿವಾರ[1]ವ ಮಾಡಿ ವಿಪ್ರರಿಗೆ ಮೃಷ್ಟಾನ್ನ
ಪ್ರೀಯದಲಿ ತಾನೊಂದು ಕೊಡದ ಲೋಭಿ
ಮಾಯಿ ಸಂಸಾರದಲಿ ಮಮತೆ ಹೆಚ್ಚಾಗಿಟ್ಟು
ಗಾಯನವ ಮಾಡಲವ ಹರಿದಾಸನೇ ೩

ಪಾತಕಾರ[2]ರಂತೆ ಪದಗಳನು ಪೇಳುತ್ತ
ಕೂಟಜನ[3] ಮನವ ಸಂತೋಷಗೊಳಿಸಿ
ಗೂಟನಾಮ[4]ಗಳ ಹಚ್ಚಿಕೊಂಡ್ಹರಿಯ ತಾ ನೆನಿಸಿ
ತಾಟತೂಟಕ[5] ಮಾಡಲವ ಹರಿದಾಸನೇ ೪

ನೀತಿಯೆಲ್ಲವನರಿತು ನಿಗಮ[6]ವೇದ್ಯನ ನಿತ್ಯ
ವಾತಸೂತ[7]ನಲ್ಲಿಹನ ವರ್ಣಿಸುತಲಿ
ಗೀತ ನರ್ತನದಿಂದ ಕೃಷ್ಣನ್ನ ಪೂಜಿಸುವ
ಪೂತಾತ್ಮ[8] ಪುರಂದರದಾಸರಯ್ಯ ೫

೧೭೫

ಕನಕದಾಸನ ಮೇಲೆ ದಯಮಾಡಲು ವ್ಯಾಸ
ಮುನಿ ಮಠದ ಜನರೆಲ್ಲ ದೂರಿಕೊಂಬುವರು ಪ

ತೀರ್ಥವನು ಕೊಡುವಾಗ ಕನಕನ್ನ ಕರೆಯಿಸಲು
ಧೂರ್ತರಾಗಿದ್ದ ವಿದ್ವಾಂಸರೆಲ್ಲ
ಸಾರ್ಥಕಾಯಿತು ಇವನ ಸಂನ್ಯಾಸಿತನವೆಲ್ಲ
ಪೂರ್ತಿಯಾಯಿತು ಎನಲು ಯತಿಯು ನಗುತಿಹನು ೧

---

1 ಬೇಡುವುದು 2 ವಂದಿಮಾಗಧರು 3 ಅಲ್ಪರು 4 ಮೂಗಿನಿಂದ ಹಿಡಿದು ಹಣೆಯ ಮೇಲೆ ಇಟ್ಟುಕೊಳ್ಳುವ ಉದ್ದನಾದ ನಾಮ 5 ಬೂಟಾಟಿಕೆ 6 ವೇದ 7 ಆಂಜನೇಯ 8 ಪುಣ್ಯಶಾಲಿ

ಹರಿದಿವಸ[1]ದಲ್ಲವರ ಪರೀಕ್ಷಿಸಬೇಕೆಂದು
ಕರೆದು ವಿದ್ವಾಂಸರನು ಕನಕನ್ನ ಬಿಡದೆ
ಕರದಲ್ಲಿ ಕದಳಿ[2]ಯ ಫಲಗಳನೆ ಇತ್ತು ನಿಂ
ದಿರದೆ ಏಕಾಂತದಲಿ ಮೆಲುವುದೆಂದೆನಲು ೨

ಊರು ಬಿಟ್ಟು ಬಲು ದೂರದಲಿ ತಾವ್ಪೋಗಿ
ಬೇರೆ ಬೇರೆ ಕುಳಿತು ವಿದ್ವಾಂಸರು
ಆರು ಇಲ್ಲದ ಬಳಿಯೆ ಮೆದ್ದವೆಂದರೆ ಕನಕ
ತೋರದೆನಗೇಕಾಂತವೆನುತ ಪೇಳಿದನು ೩

ಪೃಥ್ವ್ಯಾದಿ ಶಬ್ದಾದಿ ಶ್ರೋತ್ರಾದಿ ವಾಗಾದಿ
ತತ್ವಗಳ ಒಳ ಹೊರಗೆ ತತ್ವೇಶರು[3]
ಎತ್ತ ನೋಡಿದರತ್ತ ಪ್ರಾಪ್ತವಾಗಿರಲು ಹರಿ
ಮತ್ತೆಲ್ಲಿ ಮೆಲುವುದೆಂದೆನುತ ಪೇಳಿದನು ೪

ಮಾಣಕವು ಕೋಡಗನ[4] ಕೈಯಲ್ಲಿ ಇದ್ದಂತೆ
ಕೋಣನೆದುರಿಗೆ ಕಿನ್ನರಿ ಮಿಡಿಟಿದಂತೆ
ವೇಣುಧ್ವನಿ[5] ಬಧಿರ[6]ನ ಬಳಿ ಮಾಡಿದಂತೆ
ಕಣ್ಣು ಕಾಣದವನಿಗೆ ಕನ್ನಡಿಯ ತೋರಿದಂತೆ ೫

ನೋಡಿರೆ ಈ ಕನಕನಾಡುವ ಮಾತುಗಳ
ಮೂಢಜನರರಿಯಬಲ್ಲರೆ ಮಹಿಮೆಯ
ನಾಡಾಡಿ[7]ಯಂತೆಯೇ ಮಾಡಿಬಿಟ್ಟರು ಇವಗೆ
ನಾಡೆಲ್ಲ ಹುಡುಕಿದರು ಈಡಾ[8]ರ ಕಾಣೆ ೬

1 ಏಕಾದಶಿ 2 ಬಾಳೆಯ ಹಣ್ಣು 3 ತತ್ವಾಭಿಮಾನಿ ದೇವತೆಗಳು
4 ಕಪಿ 5 ಕೊಳಲಗಾನ 6 ಕಿವುಡ 7 ಸಾಮಾನ್ಯ 8 ಸಮಾನ

ತಮ್ಮ ಕೈವಮುಷ್ಟಿಯನು ಪಿಡಿದು ಕೇಳಲು ಯತಿಯು
ತಮ ತಮಗೆ ತೋರಿದ್ದು ಪೇಳೆ ಬ್ರಾಹ್ಮಣರು
ಗಮ್ಮನೆ ಕನಕ ಸಿರಿ ವಾಸುದೇವನೆ ಪರ
ಬೊಮ್ಮ ಪುರಂದರವಿಠಲನೆನುತ ಸಾರಿದನು ೭

೧೭೭

ರತುನ ದೊರಕಿತಲ್ಲ ಎನಗೆ ದಿವ್ಯ
ರತುನ ದೊರಕಿತಲ್ಲ ಪ.

ರತುನ ದೊರಕಿತು ಎನ್ನ ಜನ್ಮ ಪ
ವಿತ್ರವಾಯಿತು ಈ ದಿನವು ನಾ
ಯತನಗೈವುತ ಬರುತಿರಲು ಪ್ರ
ಯತನವಿಲ್ಲದೆ ವಿಜಯರಾಯರೆಂಬ ಅ.ಪ.

ಪಥದಿ ನಾ ಬರುತಿರಲು–ಥಳಥಳವೆಂದು
ಅತಿಕಾಂತಿ ಝಳಪಿಸಲು–ಬೆರಗಾಗುತ್ತ
ಅತಿ ಚೋದ್ಯವ ಕಾಣಲು–ಸೇವಿಸುತಿರೆ
ಸತತ ಕರ ಪಿಡಿದಾದರಿಸಿ ಮನೋ
ರಥವ ಪೂರೈಸುತಲಿ ದಿವ್ಯ ಸ
ನ್ಮತಿಯ ಪಾಲಿಸಿ ಮೋಕ್ಷ ಸುಪಥವ
ಅತಿಶಯದಿ ತೋರುತಲಿ ಪೊರೆಯುವ ೧

ಜ್ಞಾನವೆಂಬೊ ಪುತ್ಥಳಿ[1]–ಕಂಬಿಯಲಿ
ಆಣಿಮುತ್ತಿನ ಭಕ್ತಿಲಿ–ಸುಕೃತಮಾಲಾ
ನಾನಾವಿಧ್ಧವಳದಲಿ–ಸೇರಿಸುತಿರೆ
ಪ್ರಾಣ ಪದಕವೆಂಬ ಮಾಲಾನು
ಮಾನವಿಲ್ಲದೆ ಕೊರಳಿಗ್ಹಾಕುತ
ಗಾನದಿಂ ಕುಣಿಯುತಲಿ ಪಾಡುತ
ದೀನ ಜನರುದ್ಧಾರಗೈಯುವ ೨

ಶೋಧಿಸಿ ಗ್ರಂಥಗಳ–ಸುಳಾದಿಯು
ಮೋದದಿಂದಲಿ ಬಹಳ–ಕವಿತೆ ಮಾಡಿ
ಸಾಧುಜನಕೆ ಸುಕಾಲ–ಆನಂದವಿತ್ತು
ವಾದಿ ಜನರನು ಗೆದ್ದು ವಾದಿಸಿ
ಮಾಧವ ಜಗನ್ನಾಥವಿಠಲನ
ಪಾದಕಮಲಕೆ ಮಧುಪ[2]ನಂದದಿ
ಸಾದರದಿ ತೋರಿಸುತ ಮರೆಯುವ ೩

## ತೀರ್ಥಕ್ಷೇತ್ರ ಸ್ತುತಿ

### ೧೭೭

### ಉಡುಪಿ

ಈ ಸೊಬಗು ಇನ್ನಾವ ಕ್ಷೇತ್ರದಲಿ ಕಾಣೆ ನಾ, ಇಲ್ಲಿ ಪ.
ವಾಸುದೇವ ಮುನಿಯಿದ್ದ ಕಾರಣ

---

1 ಗೊಂಬೆ 2 ತುಂಬಿ

ರಾಜಧಾನಿಯು ನೋಡೆ ಇಂದ್ರಭವನಕೆ ಮೇಲು (ಮಿಗಿಲು?)
ತೇಜದಲಿ ನೋಡೆ ಸೂರ್ಯರನ ಸೋಲು
ಪೂಜೆಯಲಿ ನೋಡೆ ಸರ್ವ ಧರಣಿಗೆ ಮೇಲು (ಮಿಗಿಲು?)
ಭೋಜನದಲಿ ನೋಡೆ ಅಮೃತಕೆ ಮೇಲು (ಮಿಗಿಲು?) ೧

ಉತ್ಸಾಹದಲಿ ನೋಡೆ ನಹಿ ಪ್ರತಿ[1] ನಹಿ ಪ್ರತಿ
ಸತ್ಸಂಗತಿಯು ನೋಡೆ ಬಂಧಸಂಗತಿ
ಸುಚರಿತೆಯು ನೋಡೆ ಶುದ್ಧ ಸತ್ವ ನೀತಿ
ಮತ್ಸರ ಮರೆದು ನೋಡೆ ಇಲ್ಲೆ ಮುಕುತಿ ೨

ಓಲಗದಲಿ ನೋಡೆ ಸತ್ಯಲೋಕಕೆ ಸಮ
ಪೇಳುವ ಕೀರ್ತನೆ ನೋಡು ವೇದಸ್ತೋಮ
ಬಾಲ ಉಡುಪಿನ ಕೃಷ್ಣ ವಿಜಯವಿಠಲರೇಯನ
ತಿಳಿದ ಮಾನವಗೆ ಫಲ ನಿಷ್ಕಾಮ ೩

೧೭೮

ಶ್ರೀರಂಗ

ಇಷ್ಟು ದಿನ ಭೂವೈಕುಂಠ ಎಷ್ಟು ದೂರವೆನುತಿದ್ದೆ
ದೃಷ್ಟಿಯಿಂದಲಿ ನಿಮ್ಮ ಕಂಡೆ ಸೃಷ್ಟಿಪತಿ ಶ್ರೀರಂಗೇಶ ಪ.

ಚಿತ್ರ ಬೀದಿ ವಿರಾಜಿತ ಚಾರು[2] ನೂಪುರ ಶೋಭಿತ
ಸಪ್ತ ಪ್ರಾಕಾರ ಸಂಪ್ರಷ್ಟ[3] ಉತ್ತಮ ಶ್ರೀರಂಗಶಾಯಿ ೧

1 ಪ್ರತಿಯಿಲ್ಲ 2 ಮನೋಹರ 3 ಹಿಂಬದಿ

ಹೇಮಕವಾಟ[1]ಗಳಿಂದ ಹೇಮ ಸೋಪಾನ[2]ಗಳಲ್ಲಿ
ಹೇಮ ಕಟಾಂಜನ[3]ದಿಂದ ಗುಣಶೋಭಿತ ಶ್ರೀರಂಗೇಶ ೨

ಚತುರ ವೇದಗಳಲ್ಲಿ ಚತುರ ಮೂರ್ತಿ ವೀರ್ಯದಲ್ಲಿ
ಚತುರ ದಿಕ್ಕುಗಳಲ್ಲಿ ಚದುರ ಶ್ರೀರಾಮ ರಂಗಶಾಯಿ ೩

ಪಂಕಜನಾಭನೆ ಏಸು ಪಾವನವೊ ನಿಮ್ಮ ದಿವ್ಯ
ಕುಂಕುಮಾಂಕಿತ ಚರಣ ಪಂಕಜಾಕ್ಷ ಶ್ರೀರಂಗೇಶ ೪

ಪುಣ್ಯವಿದ್ಯಾದಯಾನಿಧೆ ಪನ್ನಗಶಾಯಿ ಶೋಭಿತ
ಧನ್ಯ ಚಂದ್ರ ಪುಷ್ಕರಿಣಿ ಉನ್ನಂತ ಶ್ರೀಹಯವದನ ೫

## ೧೭೯

## ಪಾಂಡುರಂಗ ಪ್ರಶಸ್ತಿ

ಶರಣು ಶರಣು ನಿನಗೆಂಬೆನೊ ವಿಠಲ ಪ.

ಕರುಣಾನಿಧಿಯೆಂದೆ ಕಾಯಯ್ಯ ವಿಠಲ ಅ.ಪ.

ಶಿಶುವಾಗಿ ಜನಿಸಿದ್ಯೊ ಶ್ರೀರಾಮ ವಿಠಲ
ಶಶಿಧರ[4]ನುತ ಗೋಪಿಕಂದನೆ ವಿಠಲ
ಅಸುರೆ ಪೂತನಿ ಕೊಂದ ಶ್ರೀಕೃಷ್ಣ ವಿಠಲ
ಕುಸುಮನಾಭ ಸಿರಿವರ ಮುದ್ದು ವಿಠಲ ....

1 ಚಿನ್ನದ ಬಾಗಿಲು 2 ಚಿನ್ನದ ಮೆಟ್ಟಿಲು 3 ಚಿನ್ನದ ಕಟಕಟೆ 4 ಈಶ್ವರ

ಅರಸಿ ರುಕ್ಮಿಣಿಗೆ ನೀ ಅರಸನೊ ವಿಠಲ
ಸರಸಿಜ ಸಂಭವ ಸನ್ನುತ ವಿಠಲ
ನಿರುತ ಇಟ್ಟಿಗೆ ಮೇಲೆ ನಿಂತೆಯ್ಯಾ ನೀ ವಿಠಲ
ಚರಣ ಸೇವೆಯನಿತ್ತು ಕಾಯಯ್ಯ ವಿಠಲ ೨

ಕಂಡೆ ಗೋಪುರ ವೆಂಕಟ ಪ್ರಭು ವಿಠಲ
ಅಂಡಜ ವಾಹನ ಹೌದೊ ನೀ ವಿಠಲ
ಪಾಂಡುನಂದನ ಪರಿಪಾಲನೆ ವಿಠಲ
ಪುಂಡರೀಕಾಕ್ಷ ಶ್ರೀಪುರಂದರವಿಠಲ ೩

## ೧೮೦

## ತಿರುಪತಿ

ವಲಯಾಕಾರಾದ್ರಿ[1] ಸುತ್ತವೊಪ್ಪುತ್ತಿರಲು ಎತ್ತ
ತಿಳಿದರೆ ಸ್ವರ್ಣವರ್ಣಮಯವಾಗಿದೆ
ಪೊಳೆವ ಚತುರ ಬೀದಿ ಜ್ಞಾನ ಭಕುತಿ ವೈರಾಗ್ಯ
ಸಲೆ ಧರ್ಮ ಪೆಸರಿನಲ್ಲಿ ಕರೆಸುತಿವಕೊ
ಥಳಥಳಿಸುವ ಉನ್ನತ ಪ್ರಾಕಾರ ಗೋಪುರ
ಸುಲಭವಲ್ಲಯ್ಯ ಕೊಂಡಾಡುವ ಜನಕೆ
ಶಿಲೆ ಎನ್ನದಿರಿ ಎಲ್ಲ ಮಣಿಮಯದಿಂದ ವೆ
ಗ್ಗಳ[2]ವಾಗಿ ಬಿಗಿದ ಸೊಬಗು ನೋಡಿರೊ

---

1 ಗುಂಡಗಿರುವ ಬೆಟ್ಟ. 2 ಹೆಚ್ಚು.

ತಳಿಗೆ ತೋರಣ ಕಟ್ಟಿ ಪರಮ ಮಂಗಳವಾಗಿ
ಸುಳಿದಿದೆ ಬಲುಕಾಂತಿ ಗಗನ ಮುಟ್ಟಿ
ಚೆಲುವ ಮಹದ್ವಾರ ಪರಿಪರಿ ಮಾಟದಾ ಬಾ
ಗಿಲು ಅಲ್ಲಿ ಕುಳಿತಿದ್ದ ದ್ವಾರದವರು
ಒಳಗೆ ಗರುಡಗಂಬ ಮತ್ತೆ ಪ್ರಾಕಾರಾ ಮಧ್ಯ
ಪೊಳಲು[1] ಭೋಗಮಂಟಪ ಸುತ್ತ ಪೌಳಿ[2]
ಕಳಶದಿಂದೊಪ್ಪುವ ವೈಚಿತ್ರ್ಯವಾದಾನಂದಾ
ನಿಲಯ ವಿಮಾನ ಮ್ಯಾಲೆ ಗೋಚರಿಪ
ಬಲು ಮೂರ್ತಿಗಳು ಉಂಟು ವೇದ ಪ್ರಮಾಣವೆನ್ನಿ
ಸುಳಿವುವು ಒಂದೊಂದನಂತವಾಗಿ
ಬಲ ಭಾಗದಲ್ಲಿ ಉತ್ತಮ ತೀರ್ಥವೊಂದು[3] ವಿ
ಮಲವಾಗಿದ್ದ ವಾರಿಯಿಂದ ಶೋಭಿಸುತಿದೆ
ಇಳೆಗಿದೆ ವೈಕುಂಠ ನಿಜವೆಂದು ಸತ್ಯವಾಗಿ
ತಲೆಬಾಗಿ ಮುನಿಜನ ತುತಿ[4]ಪರದಕೊ
ಜಲಜ ಸಂಭವ ಶಿವ ಸುರಪತಿ ಮುಂತಾಗಿ
ಜಲಚರಾದಿಯ ಜನ್ಮ ಬಯಸಿಪ್ಪರು
ಒಲಿಸುವರಿತ್ತೊಂದು ರೂಪದಿಂದಲಿ ತೊಂ
ಬಲು (?) ಅಪೇಕ್ಷಿಸುತ್ತ ಸರ್ವೋಗವಾಗೆಲ್ಲ
ಬೆಲೆ ಇಲ್ಲದಿಪ್ಪ ವಾದ್ಯಂಗಳ ಘೋಷ ಪರಿಜನದ
ಗಲಭೆ ನೋಡಿದರಷ್ಟ ದಿಕ್ಕು ತುಂಬೆ
ಮಲ[5]ವಿರಹಿತರಾಗಿ ಮುಕ್ತಾಮುಕ್ತರು ತಮ್ಮ
ಬಳಗದೊಡನೆ ಕ್ರೀಡೆಯಾಡುವರು
ಚೆಲುವ ತಿರುವೆಂಗಳ ವಿಜಯವಿಠಲ ವೆಂಕಟ
ನೆಲೆಯಾಗಿ ಇಪ್ಪ ಶುದ್ಧ ಭಕ್ತರ ವಶನಾಗಿ

('ಸುಳಾದಿ'ಯಿಂದ)

---

1 ಊರು 2 ಗೋಡೆ 3 ಸ್ವಾಮಿ ಪುಷ್ಕರಿಣಿ 4 ಕೊಂಡಾಡು 5 ಪಾಪ

೧೮೧

## ಮಂತ್ರಾಲಯಂ

ಸುರಪನಾಲಯ[1]ದಂತೆ ಮಂತ್ರಾಲಯು
ಕರೆಸುವುದುಂ ಕಂಗೊಳಿಸುವುದು ನೋಳ್ಪ ಜನಕೆ ಪ.

ಕಾಮಧೇನುವಿನಂತೆ ಇಪ್ಪ ಗುರುವರ ಸಾರ್ವ
ಭೌಮ ಸುಧಿಯೀಂದ್ರಸುತ ರಾಘವೇಂದ್ರ
ಆಮಯಾದಿ[2]ಪಖಿಳತಮಿಶ್ರ[3]ವೋಡಿಸುವ ಚಿಂ
ತಾಮಣಿ ಪ್ರಕಾಶದಂತಿಪ್ಪ ವೃಂದಾವನದಿ ೧

ಸುರತರುವಿನಂತಿಪ್ಪ ಕೀರ್ತಿ ಸಚ್ಛಾಯಾಶ್ರಿ
ತರ ಮನೋರಥಗಳನು ಪೂರೈಸುವ
ಧರಣಿಸುರಾಖ್ಯ[4] ಷಟ್ಪದ[5]ಗಳಿಗೆ ಸತ್ಯದಾ
ಪರಿಮಳದಿ ತೃಪ್ತಿಬಡಿಸುವ ಮರುತನಂತೆ ೨

ವಾರಾಹಿ ಎಂಬ ನಂದನವನದಿ ಜನರತಿ ವಿ
ಹಾರ ಮಾಳ್ಪರುಂ ಸ್ನಾನ ಪಾನದಿಂದ
ಶ್ರೀರಾಘವೇಂದ್ರನಿಲ್ಲಿಪ್ಪ ಕಾರಣ ಪರಮ
ಕಾರುಣ್ಯ ನಿಧಿ ಜಗನ್ನಾಥವಿಠಲನಿಹನು ೩

---

1 ಇಂದ್ರಲೋಕ 2 ರೋಗ, ರುಜಿನ. 3 ಕತ್ತಲೆ 4 ಬ್ರಾಹ್ಮಣರೆಂಬ
5 ದುಂಬಿ

೧೮೨

ಅನುಗಾಲ[1]ವು ಚಿಂತೆ ಜೀವಕೆ, ತನ್ನ
ಮನವು ಶ್ರೀರಂಗನೊಳು ಮೆಚ್ಚುವತನಕ ಪ.

ಸತಿಯು ಇದ್ದರೆ ಚಿಂತೆ, ಸತಿಯು ಇಲ್ಲದ ಚಿಂತೆ
ಮತಿಹೀನೆ ಸತಿಯಾದರು ಚಿಂತೆಯು
ಪೃಥಿವಿಯೊಳಗೆ ಸತಿ ಅತಿ ಚೆಲ್ವೆಯಾದರೆ
ಮಿತಿ ಮೇರೆಯಿಲ್ಲದ ಮೋಹದ ಚಿಂತೆ ೧

ಪುತ್ರರಿದ್ದರು ಚಿಂತೆ ಪುತ್ರರಿಲ್ಲದ ಚಿಂತೆ
ಅತ್ತು ಅನ್ನಕೆ ಕಾಡುವ ಚಿಂತೆಯು
ತುತ್ತಿನ ಆಸೆಗೆ ತುರುಗಳ ಕಾಯ್ದರು
ಸುತ್ತೇಳು ಕಡೆಯಿಲ್ಲದ ಚಿಂತೆಯು ೨

ಬಡವನಾದರು ಚಿಂತೆ ಬಲ್ಲಿದನಾದರು ಚಿಂತೆ
ಹಿಡಿ ಹೊನ್ನು ಕೈಯೊಳಿದ್ದರೆ ಚಿಂತೆಯು
ಪೊಡವಿಯೊಳಗೆ ಸಿರಿ ಪುರಂದರವಿಠಲನ
ಬಿಡದೆ ಚಿಂತಿಸಿದರೆ ಚಿಂತೆ ನಿಶ್ಚಿಂತೆ ೩

1 ಸರ್ವದಾ

೧೮೩

ಇಕ್ಕಲಾರದ ಕೈ ಎಂಜಲು—ಚಿಕ್ಕ
ಮಕ್ಕಳು ಅಳುತಾರೆ ಪೋಗೋ ದಾಸಯ್ಯ ಪ.

ಮಡಕೆ ತೊಳೆಯುತೇನೆ ಮನೆಯು ಸಾರಿಸುತೇನೆ
ಹುಡುಗರೊಬ್ಬರ ಕಾಣೆ ಹೋಗೋ ದಾಸಯ್ಯ
ತೊಡೆಯ ಮೇಲಿನ ಕೂಸು ಮೊಲೆಯನುಣ್ಣುತಿದೆ
ಹುಡುಗಾಟ ಮಾಡದೆ ಹೋಗೊ ದಾಸಯ್ಯ ೧

ಅಟ್ಟದ ಮೇಲಿನ ಅಕ್ಕಿ ತೆಗೆಯಬೇಕು
ಹೊಟ್ಟೆ ನೋಯುತಲಿದೆ ಹೋಗೊ ದಾಸಯ್ಯ
ಮುಟ್ಟಾಗಿ ಇದ್ದೇನೆ ಮನೆಯೊಳಗಾರಿಲ್ಲ
ನಿಷ್ಠುರ ಮಾಡದೆ ಹೋಗೋ ದಾಸಯ್ಯ ೨

ವೀಸವ[1] ಕಾಸಿಗೆ ದವಸವ ನಾ ತಂದೆ
ಕೂಸಿಗೆ ಸಾಲದು ಹೋಗೊ ದಾಸಯ್ಯ
ಆಸೆಕಾರ ನೀನು ದೋಷಕಾರಿ ನಾನು
ಶೇಷಾಚಲವಾಸ ಪುರಂದರವಿಠಲ ೩

೧೮೪

ಉದರ ವೈರಾಗ್ಯವಿದು ನಮ್ಮ
ಪದುಮನಾಭನಲಿ ಲೇಶ ಭಕುತಿಯಿಲ್ಲ ಪ.

---

1 ಒಂದು ಅಳತೆ

ಉದಯಕಾಲದಲೆದ್ದು ಗಡಗಡ ನಡಗುತ
ನದಿಯಲಿ ಮಿಂದೆ[1]ನೆಂದು ಹಿಗ್ಗುತಲಿ
ಮದ ಮತ್ಸರ ಕ್ರೋಧ ಒಳಗೆ ತುಂಬಿಟ್ಟುಕೊಂಡು
ಬದಿಯಲ್ಲಿದ್ದವರಿಗಾಶ್ಚರ್ಯವ ತೋರುವುದು ೧

ಕಂಚುಗಾರನ ಬಿಡಾರದಂದದಿ
ಕಂಚು ಹಿತ್ತಾಳೆ ಪ್ರತಿಮೆಗಳ ನೆರಹಿ[2]
ಮಿಂಚಬೇಕೆಂದು ಬಲು ಜ್ಯೋತಿಗಳನು ಹಚ್ಚಿ
ವಂಚನೆಯಿಂದಲಿ ಪೂಜೆಯ ಮಾಡುವುದು ೨

ಕರದಲಿ ಜಪಮಣಿ ಬಾಯಲಿ ಮಂತ್ರವು
ಅರಿವೆ ಮುಸುಕು ಮೋರೆಗೆ ಹಾಕಿ
ಪರಸತಿಯರ ಗುಣ ಮನದಲಿ ಸ್ಮರಿಸುತ
ಪರಮವೈರಾಗ್ಯಶಾಲಿಯೆಂದೆನಿಸುವುದು ೩

ಬೂಟಕತನದಲಿ ಬಹಳ ಭಕುತಿ ಮಾಡಿ
ದಿಟನೀತ ಸರಿ ಯಾರಿಲ್ಲೆನಿಸಿ
ನಾಟಕ ಸ್ತ್ರೀಯಂತೆ ಬಯಲ ಡಂಭವ ತೋರಿ
ಊಟದ ಮಾರ್ಗದ ಜ್ಞಾನವಿದಲ್ಲದೆ ೪

ನಾನು ಎಂಬುದ ಬಿಟ್ಟು ಜ್ಞಾನಿಗಳೊಡನಾಡಿ
ಏನಾದರೂ ಶ್ರೀಹರಿ ಪ್ರೇರಣೆಯೆಂದು
ಧ್ಯಾನಿಸಿ ಮೌನದಿ ಪುರಂದರವಿಠಲನ
ಕಾಣದೆ ಮಾಡಿದ ಕಾರ್ಯಗಳೆಲ್ಲವು ೫

1 ಸ್ನಾನ 2 ಒಟ್ಟುಗೂಡಿಸಿ

೧೮೫

ಕೇಳನೋ ಹರಿ ತಾಳನೋ ಪ.

ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ ಅ.ಪ.

ತಂಬೂರಿ ಮೊದಲಾದ ಅಖಿಳವಾದ್ಯಗಳಿದ್ದು
ಕೊಂಬು ಕೊಳಲು ಧ್ವನಿ ಸ್ವರಗಳಿದ್ದು
ತುಂಬುರು ನಾರದರ ಗಾನ ಕೇಳುವ ಹರಿ
ನಂಬಲಾರ ಈ ಡಂಭಕದ ಕೂಗಾಟ ೧

ನಾನಾ ಬಗೆಯ ರಾಗ ಭಾವ ತಿಳಿದು ಸ್ವರ
ಜ್ಞಾನ ಮನೋಧರ್ಮ ಜಾತಿಯಿದ್ದು
ದಾನವಾರಿಯ ದಿವ್ಯನಾಮರಹಿತವಾದ
ಹೀನ ಸಂಗೀತ ಸಾಹಿತ್ಯಕ್ಕೆ ಮನವಿತ್ತು ೨

ಅಡಿಗಡಿಗಾನಂದ ಬಾಷ್ಪಪುಳಕ[1]ದಿಂದ
ನಡೆ ನುಡಿಗೆ ಶ್ರೀಹರಿಯೆನ್ನುತ
ದೃಢಭಕ್ತರನು ಕೂಡಿ ಹರಿಕೀರ್ತನೆ ಪಾಡಿ
ಕಡೆಗೆ ಪುರಂದರವಿಠಲನೆಂದರೆ ಕೇಳ್ವ ೩

೧೮೬

ಜಾಲಿಯ ಮರದಂತೆ ಧರೆಯೊಳು
ದುರ್ಜನರು ಜಾಲಿಯ ಮರದಂತೆ ಪ.

ಮೂಲಾಗ್ರ[2] ಪರಿಯಂತ ಮುಳ್ಳು ಕೂಡಿಪ್ಪಂತೆ ಅ.ಪ.

---

1 ರೋಮಾಂಚ 2 ಬೇರಿನಿಂದ ತುದಿಯವರೆಗೆ

ಬಿಸಿಲಲಿ ಬಳಲಿ ಬಂದವರಿಗೆ ನೆರಳಿಲ್ಲ
ಹಸಿದು ಬಂದವರಿಗೆ ಹಣ್ಣು ಇಲ್ಲ
ಕುಸುಮವಾಸನೆಯಿಲ್ಲ ಕೂಡಲು ಸ್ಥಳವಿಲ್ಲ
ರಸದಲ್ಲಿ ಸ್ವಾದ[1]ವು ವಿಷದಂತೆ ಇರುತಿಹ ೧

ಊರ ಹಂದಿಗೆ ಷಡ್ರಸಾ[2]ನ್ನವಿಕ್ಕಲು
ನಾರುವ ದುರ್ಗಂಧವ ಬಿಡಬಲ್ಲುದೆ
ಘೋರ ಪಾಪಿಗೆ ತತ್ವಜ್ಞಾನವ ಪೇಳಲು
ಕ್ರೂರ ಕರ್ಮವ ಬಿಟ್ಟು ಸುಜನನಾಗುವನೆ ೨

ತನ್ನಿಂದ ಉಪಕಾರ ತೊಟಕಾದರು ಇಲ್ಲ
ಜಿನ್ನಾಣ ಮಾತಿಗೆ ಕೊನೆಯಿಲ್ಲವು
ಅನ್ನಕ್ಕೆಸೇರಿದ ಕುನ್ನಿ[3] ಮಾನವರಂತೆ
ಇನ್ನಿವರ ಕಾರ್ಯವು ಪುರಂದರವಿತಲ ೩

೧೯೭

ನಗೆಯು ಬರುತಿದೆ ಎನಗೆ ನಗೆಯು ಬರುತದೆ ಪ.
ಜಗದೊಳಿರುವ ಜಾಣರೆಲ್ಲ ಹಗರಣೆ ಮಾಡುವುದನೆ ಕಂಡು
ಅ.ಪ.

ಪರವನಿತೆಯೊಲುಮೆಗೊಲಿದು
ಹರುಷದಿಂದ ಅವಳ ಬೆರೆದು
ಹರಿವ ನೀರಿನೊಳಗೆ ಮುಳುಗಿ
ಬೆರಳನೆಣಿಸುತಿಹರ ಕಂಡು ೧

1 ರುಚಿ 2 ಮಧುರ, ಲವಣ, ತಿಕ್ತ, ಕಟು, ಕಷಾಯ, ಆಮ್ಲ.
3 ನಾಯಿಮರಿ

ಪತಿಯು ಸೇವೆ ಬಿಟ್ಟು ಪರ
ಪತಿಯು ಕೂಡೆ ಸರಸವಾಡಿ
ಸತತ ಪ್ರೈಯಂ ತೋಳೆದು ಹಲವು
ವ್ರತವ ಮಾಳ್ಪ ಸತಿಯು ಕಂಡು ೨

ಹೀನ ಗುಣವ ಮನದೊಳಿಟ್ಟು
ತಾನು ವಿಷಪುಂಜ[1]ನಾಗಿ
ಮುನಿ ಪುರಂದರವಿಠಲನ್ನ
ಧ್ಯಾನ ಮಾಡುವವನ ಕಂಡು ೩

೧೮೮

ಬೇವು ಬೆಲ್ಲದೊಳಿಡಲೇನು ಫಲ
ಹಾವಿಗೆ ಹಾಲೆರದೇನು ಫಲ ಪ.

ಕುಟಿಲ[2]ವ ಬಿಡದಿಹ ಮನುಜರು ಮಂತ್ರವ
ಪಠನೆಯು ಮಾಡಿದರೇನು ಫಲ
ಸಟೆ[3]ಯನ್ನಾಡುವ ಮನುಜರು ಸಂತತ
ನಟನೆಯು ಮಾಡಿದರೇನು ಫಲ ೧

ಕಪಟತನದಲಿ ಕಾಡುಂತ ಜನರು
ಜಪವನು ಮಾಡಿದರೇನು ಫಲ
ಕುಪಿತತನ[4]ವನು ಬಿಡದೆ ನಿರಂತರ
ಉಪವಾಸಮಾಡಿದರೇನು ಫಲ ೨

---

1 ರಾಶಿ 2 ಮೋಸ, ವಂಚನೆ, 3 ಸುಳ್ಳು, 4 ಕೋಪ

ಮಾತಾಪಿತರನು ಬಳಲಿಸಿದಾತನು
ಯಾತ್ರೆಯ ಮಾಡಿದರೇನು ಫಲ
ಘಾತುಕತನವನು ಬಿಡದೆ ನಿರಂತರ
ಗೀತೆಯನೋದಿದರೇನು ಫಲ ೩

ಪತಿಗಳ ನಿಂದಿಪ ಸತಿಯರು ಬಹುವಿಧ
ವ್ರತಗಳ ಮಾಡಿದರೇನು ಫಲ
ಅತಿಥಿಗಳೆಡೆಯಲಿ ಭೇದವ ಮಾಡುತ
ಗತಿಯನು ಬಯಸಿದರೇನು ಫಲ ೪

ಹೀನ ಗುಣಂಗಳ ಹಿಂಗದೆ ಗಂಗೆಯ
ಸ್ನಾನವ ಮಾಡಿದರೇನು ಫಲ
ಶ್ರೀನಿಧಿ ಪುರಂದರವಿಠಲನ ನೆನೆಯದೆ
ಮೌನವ ಮಾಡಿದರೇನು ಫಲ ೫

೧೮೯

ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ ಪ.

ಪಡೆದವಳ ಎದೆಗೊರಳ ಕೊಯ್ವಂಥ ಚೋರಿ ಅ.ಪ.

ಮಾತು ಕಲಿತರೆ ಏನು, ಮಹಜಾಣೆಯಾದರೇನು
ಚಾತುರ್ಯವಿದ್ದರೇನು, ಚೆಲುವೆಯಾದರೇನು
ರಾಶಿ ಹಣವಿದ್ದರೇನು, ಏಸು[1]ಪೇಳಿದರೇನು
ರೀತಿ ಕೆಟ್ಟ ಜನ್ಮ ಹೊರೆಯಬೇಕಲ್ಲ ೧

1 ಎಷ್ಟು

ಹೊರಗೆ ಬರಲಿಕೆ ಸಲ್ಲ, ಇದಿರಾಗಿ ಇರ ಸಲ್ಲ
ಅಡುಗೆ ಯೋಗ್ಯಳಲ್ಲ, ಹರಿಯು ತಾನೆ ಬಲ್ಲ
ಮರಿಯಾದೆಗಳು ಇಲ್ಲ ಬಲು ಹಗುರ ರಾಜ್ಯಕೆಲ್ಲ
ಸರ್ವರೀತಿಲಿ ಕೆಟ್ಟ ಜನ್ಮ ಪೂರೆ ಸಲ್ಲ ೨

ಅತ್ತೆ ತನ್ನಯ ಮಗಗೆ ಮೃತ್ಯು ಎಂತೆಂಬುವಳು
ಹುಟ್ಟಿದಾ ಮನೆಯವರು ದೂಷಿಸುವರು
ಎಷ್ಟು ಹೇಳಲಿ ಬಹಳ ತುಚ್ಛ[1]ವನೆ ಮಾಡುವರು
ಅಕ್ಕ ತಂಗಿಯರಿಗೆ ದಿಕ್ಕು ಎಂಬುವರು ೩

ಉಪಕಾರ ಮಾಡಿದರೆ ಗತಿಯು ನೀನೆಂಬುವರು
ಅತಿಶ್ರಮ ಪಟ್ಟರೂ ಆದರಿಸರು
ವಿಪರೀತ ಹಣವಿದ್ದರಪಹರಿಸಿ ತಿಂಬುವರು
ಅತಿದೈನ್ಯದಿಂದ ಬೇಡಿ ಬಾಯ ಬಿಡಿಸುವರು ೪

ಚಾಕರಿಯ ಮಾಡಿದರೆ ಆಚೀಚಲಾಡುವರು
ರಾಶಿ ಅನ್ನವನುಂಡಳೆಂದು ದೂರುವರು
ಈಸು ಸೈರಿಸಿಕೊಂಡು ಏಕಾಂತದಲಿ ಕುಳಿತು
ಶ್ರೀಶ ಪುರಂದರವಿಠಲನ ನೆನೆಯೆ ನಾರಿ ೫

೧೯೦

ಹರಿ ಕೊಟ್ಟಕಾಲಕ್ಕೆ ಉಣಲಿಲ್ಲ ಪ.
ಹರಿ ಕೊಡದ ಕಾಲಕ್ಕೆ ಬಾಯ ಬಿಡುವಲ್ಲೊ ಪ್ರಾಣಿ ಅ.ಪ.

ಹತ್ತು ಸಾವಿರ ಹೊನ್ನು ತಿಪ್ಪೇಲಿ ಹೂಳಿಟ್ಟು
ಮತ್ತೆ ಉಪ್ಪಿಲ್ಲದೆ ಉಂಡೆಲ್ಲೊ ಪ್ರಾಣಿ
ಹತ್ತು ಸಾವಿರ ಹೊನ್ನು ತಿಪ್ಪೇಲಿ ಪೋಪಾಗ
ಮೃತ್ತಿಕೆ[2] ಬಾಯಲ್ಲಿ ಬಿತ್ತಲ್ಲೊ ಪ್ರಾಣಿ ೧

---

1 ಹೀನಾಯ 2 ಮಣ್ಣು

ಹುಗ್ಗಿಯು ತುಪ್ಪವು ಅಗ್ಗವಾಗಿರಲಿಕ್ಕೆ
ಗುಗ್ಗರಿಯನ್ನವ ತಿಂದೆಲ್ಲೊ ಪ್ರಾಣಿ
ಹೆಗ್ಗಳ[1]ದ ಭಾಗ್ಯವು ಗಳಿಗೇಲಿ ಪೋಪಾಗ
ಬುಗ್ಗೆಯ ಹೊಯ್ಕೊಂಡು ಹೋದೆಲ್ಲೊ ಪ್ರಾಣಿ ೨

ನಂಟರಿಷ್ಟರು ಬಂದು ಮನೆಮುಂದೆ ಕುಳಿತರೆ
ಕುಂಟು ಸುದ್ದಿಯನಾಡಿದಲ್ಲೋ ಪ್ರಾಣಿ
ಕಂಟಕ ಯಮನವರು ಕುಂಠಿಸು[2]ತ್ತೆಳೆವಾಗ
ನಂಟ ಶ್ರೀಪುರಂದರವಿಠಲನು ಪ್ರಾಣಿ ೩

೧೯೧

ಕದವ ಮುಚ್ಚಿದಳಿದಕೋ ಗಯ್ಯಾಳಿ ಮೂಳಿ ಪ.

ಕದವ ಮುಚ್ಚಿದಳಿದಕೋ ಚಿಲುಕ ಅಲ್ಲಾಡುತಿದೆ
ಒದಗಿದ್ದ ಪಾಪವು ಹೋದೀತು ಹೊರಗೆಂದು ಅ.ಪ.

ಭಾರತ ರಾಮಾಯಣ ಪುಣ್ಯಕಾವ್ಯಂಗಳ
ಸಾರತತ್ವದ ಬಿಂದು ಸೇರೀತು ಒಳಗೆಂದು ೧

ಅಂದಿಗೆ ಕಿರುಗೆಜ್ಜೆ ಮುಂಗಾಲಲಳವಟ್ಟು
ಧಿಂ ಧಿಮಿ ಧಿಮಿಕೆಂದು ಕುಣಿವ ದಾಸರ ಕಂಡು ೨

ನಂದನ ಕಂದ ಗೋವಿಂದ ಮುಕುಂದನ
ಚೆಂದವಾದ ಧ್ವನಿ ಹೋದೀತು ಕರ್ಣಕೆಂದು ೩

1 ಹೆಚ್ಚು 2 ಭಂಗಗೊಳಿಸು

ಹರಿಶರಣರ ಪಾದ ಸರಸಿಜಯುಗಳದ
ಪರಮ ಪಾವನವಾದ ರಜ[1]ವು ಬಿದ್ದೀತೆಂದು ೪

ಮಂಗಳ ಮೂರುತಿ ಪುರಂದರವಿಠಲನ
ತುಂಗ ವಿಕ್ರಮ ಪದದಂಗುಳಿ[2] ಸೋಕೀತೆಂದು ೫

೧೯೨

ನಿಂದಕರಿರಬೇಕು ಪ.

ಹಂದಿಯಿದ್ದರೆ ಕೇರಿ ಹ್ಯಾಂಗೆ ಶುದ್ಧವೋ ಹಾಂಗೆ ಅ.ಪ.

ಅಂದಂದು ಮಾಡಿದ ಪಾಪವೆಂಬ ಮಲ
ತಿಂದು ಹೋಗುವರಯ್ಯ ನಿಂದಕರು
ವಂದಿಸಿ ಸ್ತುತಿಸುವ ಜನರೆಲ್ಲರು ನಮ್ಮ
ಪೊಂದಿದ ಪುಣ್ಯವನೊಯ್ಯುವರಯ್ಯ ೧

ದುಷ್ಟ ಜನರು ಈ ಸೃಷ್ಟಿಯೊಳಗಿದ್ದರೆ
ಶಿಷ್ಟಜನರಿಗೆಲ್ಲ ಕೀರ್ತಿಗಳು
ಇಷ್ಟಪದ ಶ್ರೀಕೃಷ್ಣ ನಿನ್ನನು
ಇಷ್ಟೇ ವರವನು ಬೇಡುವೆನಯ್ಯ ೨

ದುರುಳ ಜನಂಗಳು ಚಿರಕಾಲವಿರುವಂತೆ
ಕರವ ಮುಗಿದು ವರವ ಬೇಡುವೆನು
ಪರಿಪರಿ ತಮಸಿಗೆ ಗುರಿಯಹರಲ್ಲದೆ
ಪರಮ ದಯಾನಿಧೆ ಪುರಂದರವಿಠಲ ೩

---

1 ಧೂಳಿ 2 ಬೆರಳು

೧೯೩

ಭಾಷೆಹೀನರ ಆಸೆ ಪ್ರಾಣಘಾಸಿ[1] ಪ.

ಬೇಸತ್ತು ಬೇಲಿಯ ಮೇಲೊರಗಿದಂತೆ ಅ.ಪ.

ಹಸಿವೆಗಾರದೆ ಬೆಕ್ಕು ಹತ್ತಿಯನು ಮೆದ್ದಂತೆ
ತೃಷೆ[2]ಗಾರದೆ ಜೋಗಿ ತೆವರ[3] ತೋಡಿದಂತೆ
ಬಿಸಿಲಿಗಾರದೆ[4] ಕೋತಿ ಬಂಡೆ ಮೇಲ್ಕುಳಿತಂತೆ
ಕುಸುಮೆಯ ಹೊಲದಲ್ಲಿ ಕಳ್ಳ ಹೊಕ್ಕಂತೆ ೧

ಮಳೆಯ ರಭಸಕೆ ಹೋಗಿ ಮರನೇರಿ ಕುಳಿತಂತೆ
ಚಳಿಯ ತಾಳದೆ ಜಲದಿ ಮುಳುಗಿದಂತೆ
ಹುಳುವಿನಂಜಿಕೆಗ್ಹೋಗಿ ಹುತ್ತದಲಿ ಕುಳಿತಂತೆ
ಎಳೆ ನರಿಯು ಒಂಟೆಯ ತುಟಿಗೆ ಜೋತಂತೆ ೨

ಭಾಷೆಹೀನರ ಆಸೆ ಪುರುಷನಾರಿಯ ವೇಷ
ಬಿಸಿಲು ಹಣ್ಣನು ಮೆದ್ದು ಬಳಲುತಿಹರು
ವಸುಧೆಯೊಳು ಪುರಂದರವಿಠಲನ ನೆರೆನಂಬಿ
ಕುಶಲದಲಿ ಸುಖಿಯಾಗಿ ಬಾಳೆಲವೊ ಮನುಜ ೩

೧೯೪

ಮಡಿ ಮಡಿಯೆಂದು ಮೂರ್ವರ್ಗಾರು ಹಾರುತಿ
ಮಡಿಯೆಲ್ಲಿ ಬಂತೆ ಬಿಕನಾಸಿ ಪ.

ಮಡಿಯು ನೀನೆ ಮೈಲಿಗೆ ನೀನೆ
ಸುಡಲಿ ನಿನ್ನ ಮೈಲಿಗೆ ಬಿಕನಾಸಿ ಅ.ಪ.



1 ಪೆಟ್ಟು 2 ಬಾಯಾರಿಕೆ 3 ದಿಬ್ಬ 4 ತಡೆಯದೆ

ಎಲುವು ಚರ್ಮ ಮಲಮೂತ್ರ ಗುಂಡಿಲಿ
ನಲಿವುತ ನಿಂತೆಯೊ ಬಿಕನಾಸಿ
ನೆಲೆಗೊಂಡ ನವದ್ವಾರದ ಹೊಲೆಯೊಳು
ನರಳುತ ನೀ ಬಿದ್ದೆ ಬಿಕನಾಸಿ ೧

ಹುಟ್ಟುತ ಸೂತಕ ಸಾಯಲು ಸೂತಕ
ನಟ್ಟು ನಡುವೆಲ್ಲಿ ಬಂತೆ ಬಿಕನಾಸಿ
ಪಟ್ಟಣ ಕಾವೇರಿ ಮುಳುಗಲು ನಿನ್ನ
ಮುಟ್ಟು ಹೋಗುವುದೆ ಬಿಕನಾಸಿ ೨

ಚರ್ಮವ ತೊಳೆದರೆ ಕರ್ಮವು ಹೋಗ್ವುದೆ
ಮರ್ಮವ ತಿಳಿಯದೆ ಬಿಕನಾಸಿ
ಬೊಮ್ಮನಯ್ಯ ಪುರಂದರವಿಠಲನ ಪಾಡಿ
ನಿರ್ಮಲದಿ ಬಾಳೆ ಬಿಕನಾಸಿ ೩

೧೯೫

ಹರಿಚಿತ್ತ ಸತ್ಯ ನಮ್ಮ ಹರಿಚಿತ್ತ ಸತ್ಯ ಪ.

ನರಚಿತ್ತಕ್ಕೆ ಬಂದದ್ದು ಲವಲೇಶ ನಡೆಯದು ಅ.ಪ.

ಮಡದಿ ಮಕ್ಕಳ ಭಾಗ್ಯ ಬಯಸೋದು ನರಚಿತ್ತ
ಮದುವ್ಯಾಗದಿರುವುದು ಹರಿಚಿತ್ತವು
ಕುದುರೆ ಅಂದಣ[1] ಆನೆ ಬಯಸೋದು ನರಚಿತ್ತ
ಪದಚಾರಿಯಾಗೋದು ಹರಿಚಿತ್ತವಯ್ಯ ೧

---

1 ಪಲ್ಲಕ್ಕಿ

ವಿಧವಿಧ ಯಾತ್ರೆಯ ಬಯಸೋದು ನರಚಿತ್ತ
ಒದಗಿ ಬರುವ ರೋಗ ಹರಿಚಿತ್ತವು
ಸದಾ ಅನ್ನದಾನವ ಬಯಸೋದು ನರಚಿತ್ತ
ಉದರಕ್ಕೆ ಅಳುವುದು ಹರಿಚಿತ್ತವಯ್ಯ ೨

ಧರಣಿಯನಾಳಬೇಕೆಂಬುದು ನರಚಿತ್ತ
ಪರರ ಸೇವಿಸುವುದು ಹರಿಚಿತ್ತವು
ಪುರಂದರವಿಠಲನ ಬಯಸೋದು ನರಚಿತ್ತ
ದುರಿತವ ಕಳೆವುದೆ ಹರಿಚಿತ್ತವಯ್ಯ ೩

೧೯೬

ಎಲ್ಲಾರು ಮಾಡುವುದು ಹೊಟ್ಟೆಗಾಗಿ, ಗೇಣು
ಬಟ್ಟೆಗಾಗಿ–ತುತ್ತು ಹಿಟ್ಟಿಗಾಗಿ ಪ.

ವೇದಶಾಸ್ತ್ರ ಪಂಚಾಂಗ ಓದಿಕೊಂಡು ಪರರಿಗೆ
ಬೋಧನೆಯ ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೧

ಚಂಡ ಭಟರಾಗಿ ನಡೆದು ಕತ್ತಿ, ಢಾಲು[1] ಕೈಲಿ ಹಿಡಿದು
ಖಂಡ ತುಂಡ ಮಾಡುವುದು ಹೊಟ್ಟೆಗಾಗಿ, ಗೇಣು
ಬಟ್ಟೆಗಾಗಿ ೨

ಅಂಗಡಿಗಳನ್ನೆ ಹೂಡಿ ವ್ಯಂಗ್ಯ ಮಾತುಗಳಾಡಿ
ಭಂಗಬಿದ್ದು ಗಳಿಸುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೩

ಕುಂಟೆ ತುದಿಗೆ ಕೊರಡು ಹಾಕಿ ಹೆಂಟೆಮಣ್ಣು ಸಮಮಾಡಿ
ರೆಂಟೆ[2] ಹೊಡೆದು ಬೆಳೆಸುವುದು ಹೊಟ್ಟೆಗಾಗಿ, ಗೇಣು
ಬಟ್ಟೆಗಾಗಿ ೪

---
1 ಗುರಾಣಿ 2 ನೇಗಿಲು

ಬೆಲ್ಲದಂತೆ ಮಾತನಾಡಿ ಎಲ್ಲರನು ಮರುಳುಮಾಡಿ
ಸುಳ್ಳು ಬೊಗಳಿ ತಿಂಬುವುದು ಹೊಟ್ಟೆಗಾಗಿ, ಗೇಣು
ಬಟ್ಟೆಗಾಗಿ ೫

ಕೊಟ್ಟಣವ ಕುಟ್ಟಿಕೊಂಡು ಕಟ್ಟಿಗೆಯ ಹೊತ್ತುಕೊಂಡು
ಕಷ್ಟಮಾಡಿ ತಿಂಬುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೬

ತಾಳದಂಡಿಗೆ ಶ್ರುತಿ ಮೇಳ ತಂಬೂರಿಗೊಂಡು
ಸೂಳೆಯಂತೆ ಕುಣಿವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೭

ಸಂನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಬೈರಾಗಿ
ನಾನಾ ವೇಷಗಳೆಲ್ಲ ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೮

ಹಳ್ಳದಲ್ಲಿ ಕುಳಿತುಕೊಂಡು ಕಲ್ಲು ದೊಣ್ಣೆ ಹಿಡಿದುಕೊಂಡು
ಕಳ್ಳತನವ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ೯

ಅಂದಣ ಪಲ್ಲಕ್ಕಿ ಏರಿ ಮುಂದಿ ಮಾರ್ಬಲ[1]ಗೂಡಿ
ಚಂದದಿಂದ ಮೆರೆವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೧೦

ಉನ್ನಂತ ನೆಲೆಯಾದಿಕೇಶವನ್ನ ಧ್ಯಾನವನ್ನು
ಮನಮುಟ್ಟಿ ಮಾಡುವುದು ಮುಕ್ತಿಗಾಗಿ, ಆನಂದಕಾಗಿ ೧೧

೧೯೭

ಪ್ರಾಚೀನ ಕರ್ಮವಿದು ಬಿಡಲರಿಯದು ಪ.
ಯೋಚನೆಯ ಮಾಡಿ ಬಳಲುವುದೇಕೆ ಮನವೆ ಅ.ಪ.

1 ಸೈನ್ಯ

ಸೇತುವೆಯ ಕಟ್ಟಿ, ಲಂಕೆಗೆ ಹಾರಿ, ಹನುಮಂತ
ಖ್ಯಾತಿಯಿಂದಲಿ ರಾವಣನ ಕೊಲ್ಲಿಸಿ
ಸೀತೆಯನು ತಂದು ಶ್ರೀರಾಮನಿಗೆ ಕೊಡಲಾಗಿ
ಪ್ರೀತಿಯಲಿ ಕೌಪೀನ ಬಿಡಿಸಲಿಲ್ಲ ಹರಿಯು ೧

ಲೋಕಾದಿಲೋಕಗಳ ಚರಿಸುವ ರವಿರಥಕೆ
ಏಕಗಾಲಿಯು ಏಳು ಕುದುರೆಗಳ ಕಟ್ಟಿ
ಲೋಕಲೋಕಗಳೆಲ್ಲ ಚರಿಸುವ ಅರುಣನಿಗೆ
ಬೇಕೆಂದು ಚರಣಗಳು ಕೊಡಲಿಲ್ಲ ಹರಿಯು ೨

ಸಾಸಿರ ನಾಮದ ಒಡೆಯಾದಿಕೇಶವನ
ಬೇಸರದೆ ಹೆಗಲ ಮೇಲಿಟ್ಟುಕೊಂಡು, ಆ
ಕಾಶಮಾರ್ಗದಲಿ ತಿರುಗುವ ಗರುಡನಿಗೆ
ನಾಸಿಕದ ಡೊಂಕು ತಾ ತಿದ್ದಲಿಲ್ಲ ಹರಿಯು ೩

೧೯೮

ಮಗನಿಂದ ಗತಿಯುಂಟೆ ಜಗದೊಳಗೆ ಪ.

ನಿಗಮಾರ್ಥ ತತ್ವವಿಚಾರದಿಂದಲ್ಲದೆ ಅ.ಪ.

ತ್ರಿಗುಣರಹಿತ ಪರಮಾತ್ಮನ ಧ್ಯಾನದಿ
ಹಗಲಿರುಳು ನಿತ್ಯಾನಂದದಿಂದ
ಬಿಗಿದು ಪ್ರಪಂಚವಾಸನೆಯ ಬಿಟ್ಟವರಿಗೆ
ಮಗನಿದ್ದರೇನು ಇಲ್ಲದಿದ್ದರೇನಯ್ಯ ೧

ಲಲನೆ ಪುರುಷರು ಕೂಡಿ ತಂತಮ್ಮ ಕಾಮಕ್ಕೆ
ಸಲುವಾಗಿ ಕೂಡಲು ಶುಕ್ಲರಕ್ತ
ಮಿಳಿತವಾದ ಪಿಂಡಪೂರ್ವದ ಗತಿಯಿಂದ
ನೆಲಕೆ ಬೀಳಲು ಅದು ಸಲಹಿ ರಕ್ಷಿಪುದೆ ೨

ಪರಮ ದುಷ್ಟನಾಗಿ ಮರೆದು ಸ್ವಧರ್ಮವ
ಗುರುಹಿರಿಯರ ಸಾಧುಗಳ ನಿಂದಿಸಿ
ಬೆರೆದನ್ಯ ಜಾತಿಯ ಪರನಾರಿಯರ ಘೋರ
ನರಕದಿ ಹಿರಿಯರ ನೂಕಿಸಿ ಬೀಳುವ ೩

ಸತ್ಯ ಒಬ್ಬ ಪುತ್ರ ಶಾಂತಿ ಒಬ್ಬ ಪುತ್ರನು
ವೃತ್ತಿ ನಿಗ್ರಹನೊಬ್ಬ ಸಮಚಿತ್ತವೊಬ್ಬ
ಉತ್ತಮರೀ ನಾಲ್ಕು ಮಕ್ಕಳಿದ್ದ ಮೇಲೆ
ಪೆತ್ತರೇನು ಇನ್ನು ಹೆರದಿದ್ದರೇನಯ್ಯ ೪

ಸುತರಿಲ್ಲದವರಿಗೆ ಸದ್ಗತಿಯಿಲ್ಲವೆಂಬಂತೆ
ಕೃತಕ ಶಾಸ್ತ್ರವು ಲೌಕಿಕ ಭಾವಕೆ
ಕ್ಷಿತಿಯೊಳು ಕಾಗಿನೆಲೆಯಾದಿಕೇಶವ ಜಗ
ತ್ಪತಿಯ ಭಜಿಪಗೆ ಸದ್ಗತಿಯಿಲ್ಲದ್ದೋಗೋದೆ ೫

೧೯೯

ಎಲ್ಲಿದ್ದರೇನು ಶ್ರೀಹರಿಗಲ್ಲದವನು ಪ.

ನಿಲ್ಲದೆ ಜಪಿಸಿದರೆ ಸಲ್ಲುವನೆ ಸದ್ಗತಿಗೆ ಅ.ಪ.

ಕಪ್ಪೆ ಕಮಲದ ಬಳಿಯೆ ತಪ್ಪದೆ ಅನುಗಾಲ
ಇಪ್ಪುದೈ ಒಂದು ಅರೆಘಳಿಗೆ ಬಿಡದೆ
ಒಪ್ಪದಿಂದಲಿ ಅದರ ಪರಿಮಳದ ಸೊಗಸನೀ
ಕಪ್ಪೆ ವಾಸನೆಗೊಂಡು ಹರುಷಪಡಬಲ್ಲುದೆ ? ೧

ಹಾಲುಗೆಚ್ಚಲು ಬಳಿಯು ತೊಣಚಿ ಹತ್ತಿಕೊಂಡು
ಕಾಲವನು ಕಳೆವ ಬಗೆ ಬಲ್ಲಿರೆಲ್ಲ
ವೇಳೆವೇಳೆಗೆ ಹಸುವ ಕರೆದುಂಬ ನರನಂತೆ
ಕೀಳು ತೊಣಚಿಯು ಉಂಡು ಹರುಷಪಡಬಲ್ಲದೆ ೨

ತುಳಸಿ ಸಾನ್ನಿಧ್ಯದಲಿ ನೀರುಳ್ಳಿಯನು ಹಾಕೆ
ಹೊಲಸು ಹೋಗ್ವುದೆ ಹಲವು ಕಾಲಿದ್ದರೆ
ತಿಳಿವಳಿಕೆಯಿಲ್ಲದವ ಸಿರಿ ವಿಜಯವಿಠಲನ
ಬಳಿಯಲಿದ್ದರೇನು ದೂರಿದ್ದರೇನು ? ೩

೨೦೦

ಯಾಚಕರು ಪರರ ಸಂಕಟ ಬಲ್ಲರೆ ಪ.

ಭೂಚಕ್ರದಲಿ ಗಾಳಿಯಂತೆ ತಿರುಗಲು ಬಿಡರು ಅ.ಪ,

ಕೌಪೀನವನು ಧರಿಸಿ ಮುಖವ ಡೊಂಕವ ಮಾಡಿ
ಕೋಪದಿಂದಲಿ ಕರವನೆತ್ತಲ್ಯಾಕೆ
ವಾಪಿ[1] ಕೂಪ[2]ವ ಮೀರಿ ಸಮುದ್ರವನು ನೆರೆ ದಾಟಿ
ರೂಪಾಂತರದಿ ಮನೆಮನೆಯ ಪೊಕ್ಕರು ಬಿಡರು ೧

---

1 ಬಾವಿ 2 ಬಾವಿ

ವಿಷವ ಸವಿದುಂಡು ಮುಹಮುಡುವ ಪ್ರವೇಶಿಸಿ
ವಸುಧೆಯೊಳು ಬೇಡಿ ತಿರಿತಂದುಂಡರು
ಬೆಸಬೆಸನೆ ವನವನವ ತಿರುಗಿ ಅಜ್ಞಾತದಲಿ
ವಸಸಿ ಮಾನಸದಿ ಗೃಹಕರ್ಮ ಮಾಡಲು ಬಿಡರು ೨

ಜುಟ್ಟು ಜನಿವಾರವನು ಕಿತ್ತುಕೊಂಡು ಯತಿಯಾಗಿ
ಕಟ್ಟಕಡೆಯಲಿ ಗೃಹಸ್ಥ ಧರ್ಮ ತೊರೆದು
ಹುಟ್ಟು ಗತಿಯಿಲ್ಲೆನಗೆ ಕೃಷ್ಣ ಕೃಷ್ಣ ವಿಜಯ
ವಿಠಲನ ಪಾದಕ್ಕೆ ಮೊರೆಯಿಟ್ಟರು ಬಿಡರು ೩

೨೦೧

ಭೂಷಣಕೆ ಭೂಷಣ ಇದು ಭೂಷಣ
ಶೇಷಗಿರಿವಾಸ ಶ್ರೀವರ ವೆಂಕಟೇಶ ಪ

ನಾಲಿಗ್ಗೆ ಭೂಷಣ ನಾರಾಯಣ ನಾಮ
ಕಾಲಿಗ್ಗೆ ಭೂಷಣ ಹರಿಯಾತ್ರೆಯು
ಆಲಯ[1]ಕೆ ಭೂಷಣ ತುಲಸಿ ವೃಂದಾವನ, ವಿ
ಶಾಲಕರ್ಣಕೆ ಭೂಷಣ ವಿಷ್ಣುಕಥೆಯು ೧

ದಾನವೇ ಭೂಷಣ ಇರುವ ಹಸ್ತಂಗಳಿಗೆ
ಮಾನವೇ ಭೂಷಣ ಮಾನವರಿಗೆ
ಜ್ಞಾನವೇ ಭೂಷಣ ಮುನಿಯೋಗಿವರರಿಗೆ
ಮಾನಿನಿಗೆ ಭೂಷಣ ಪತಿಭಕ್ತಿಯು ೨

ರಂಗನನು ನೋಡುವುದೇ ಕಂಗಳಿಗೆ ಭೂಷಣ
ಮಂಗಳಾಂಗಗೆ ಮಣಿವ ಶಿರ ಭೂಷಣ
ಶೃಂಗಾರ ತುಲಸಿ ಮಣಿ ಕೊರಳಿಗೆ ಭೂಷಣ
ರಂಗವಿಠಲ ನಿಮ್ಮ ನಾಮ ಅತಿ ಭೂಷಣ ೩

---

1 ಮನೆ

## ೨೦೨

### ಉಗಾಭೋಗ

ಜಾರತ್ವ[1]ವನು ಮಾಡಿದ ಪಾಪಗಳಿಗೆಲ್ಲ
ಗೋಪೀಜನ ಜಾರನೆಂದರೆ ಸಾಲದೆ

ಚೋರತ್ವವನು ಮಾಡಿದ ಪಾಪಗಳಿಗೆಲ್ಲ
ನವನೀತ[2] ಚೋರನೆಂದರೆ ಸಾಲದೆ

ಕ್ರೂರತ್ವವನು ಮಾಡಿದ ಪಾಪಗಳಿಗೆಲ್ಲ
ಮಾವನ ಕೊಂದವನೆಂದರೆ ಸಾಲದೆ

ಪ್ರತಿದಿವಸ ಮಾಡಿದ ಪಾಪಗಳಿಗೆಲ್ಲ
ಪತಿತ ಪಾವನನೆಂದರೆ ಸಾಲದೆ

ಇಂತಿಪ್ಪ ಮಹಿಮೆಯೊಳೊಂದನಾದರು ಒಮ್ಮೆ
ಸಂತತ ನೆನೆವರ ಸಲಹುವ ಸಿರಿಕೃಷ್ಣ

## ೨೦೩

ಬಲ್ಲವಗಿಲ್ಲಿದೆ ವೈಕುಂಠ ಪ.

ಬಲ್ಲವಗೆಲ್ಲೂ ಶ್ರೀಹರಿಪೂಜೆ ಅ.ಪ.

ಶರೀರ ಹರಿಯು ಪಟ್ಟಣ, ಹೃದಯ
ಸರೋಜ[3]ವಾತನ ಅರಮನೆ
ಸೂರ್ಯಾದಿ ದೇವರು ಚಕ್ಷು[4]ರಾದಿಗಳಲ್ಲಿ
ದ್ವಾರಪಾಲಕರಾಗಿ ಇಪ್ಪರೆಂದು

1 ಹಾದರ 2 ಬೆಣ್ಣೆ 3 ಕಮಲ 4 ಕಣ್ಣು

ನಡೆ ಸರ್ವದಾ ಶ್ರೀಹರಿಯ ಯಾತ್ರೆ
ನುಡಿ ಸರ್ವಶಬ್ದಾರ್ಥ ಹರಿಯ ನಾಮ
ಬಿಡದೆ ಶ್ರೀಹರಿಗೆರಗುವ ಚೇತನ
ಜಡಗಳೆಲ್ಲ ಶ್ರೀಹರಿಯ ಪ್ರತಿಮೆಯೆಂದು ೨

ನಾರಾಯಣ ಅನಿರುದ್ಧ ರೂಪಗಳಿಂದ
ಶ್ರೀರಮಣನೆ ಭೋಜ್ಯ[1]ಗಳಲ್ಲಿಪ್ಪ
ಸಾರ ಅಂಶವನು ಪ್ರದ್ಯುಮ್ನ ಸಂಕರುಷಣ
ಮೂರುತಿಯಿಂದ ಭುಂಜಿಪನೆಂದು ೩

ಹರಿ ಚರಾಚರ ಸರ್ವ ಜಗದ್ಭರಿತ
ಮುರಹರನಿದ್ದುದೆ ವೈಕುಂಠ
ನರಹರಿಯಲಿ ನವವಿಧ ಭಕುತಿಗೆ
ಸರಿಸಮವೆಂದಿಗಿಲ್ಲವೆಂದು ೪

ಜಾಗರಾ[2]ದಿಗಳಲ್ಲಿ ವಿಶ್ವಾದಿ ಮೂರುತಿ
ಯೋಗಿ ಶ್ರೀಕೃಷ್ಣನೆ ವಿಷಯಂಗಳ
ಭೋಗಿಪನೆಂಬ ಯೋಗಿಗೆ ವಿಹಿತ
ಭೋಗಂಗಳೆಲ್ಲ ಯಾಗಂಗಳೆಂದು ೫

೨೦೪

ಪಾಥೇಯ[3]ವ ಕಟ್ಟಿರೊ ವೈಕುಂಠಕೆ ಪಯಣ[4] ಸ
ಮ್ಮತವಾದರೆ ಪ.

---

1 ಉಣಿಸು 2 ಎಚ್ಚರಿಕೆ 3 ಬುತ್ತಿ 4 ಪ್ರಯಾಣ

ಮಾತಾಪಿತರುಯೆಂಬೊ ಭಕ್ತಿ ಚಿತ್ರಾನ್ನವ
ಪಾರ್ಥಸೂತ[1]ನ ಪಾದಪದ್ಮ ಪತ್ರವ ಹಾಸಿ ಅ.ಪ.

ಹರಿಭಕ್ತಿ ಹರಿಗೋಲಿಂ[2]ದ ಮೆಲ್ಲನೆ ನೀವು
ವಿರಜಾನದಿಯ ದಾಟಿರೋ
ಕರಜಾಗ್ರ[3]ಗಳಿಂದ ಹಿರಣ್ಯಕನನು ಸೀಳಿದ
ಪರವಾಸುದೇವನ ದರುಶನವಾಹೋದಯ್ಯ ೧

ಪ್ರಳಯುದ್ಬಾವಳಿಯಿಲ್ಲವೊ ಪೇಳುವುದೇನು
ಚಳಿಮಳೆ ಬಿಸಿಲಿಲ್ಲವೋ
ಬೆಳಸು ಬಿತ್ತಿಲ್ಲದ ಬೇಕಾದ ಸಂಪತ್ತು
ನಳಿನನಾಭನ ಪುರದೊಳಗೆ ನೆಲೆಸಿಹುದಯ್ಯ ೨

ಶುದ್ಧ ಸಾತ್ವಿಕ ಪುರವು ತಾಮಸರಿ[4]ಗೆ
ಪೊದ್ದಲಳವಲ್ಲವೋ
ಅಧ್ಯಾತ್ಮ ಅರ್ಜುನನಿಗೆ ನಿರ್ಧಾರ ಪೇಳಿದ
ತದ್ಧಾಮ್[5] ಪರಮಂ ಮಮವೆಂಬೊ ಪುರವೊ ೩

ಕೂಗಳತೆಗೆ ಕೊಂಚವೊ ಹರಿಯುಪುರ
ನಾಗರಾಜನೆ ಸಾಕ್ಷಿಯೋ
ನಾಗಶಯನನಲ್ಲಿ ನಮ್ಮ ಕಂಡರೆ
ಹೋಗಬೇಡಿರೆಂದು ಹುಟ್ಟ ತಡೆವನೊ ೪

1 ಕೃಷ್ಣ 2 ದೋಣಿ 3 ಉಗುರು 4 ಜಡರು 5 ಆ ಮನೆ

ಬರ[1]ವೆಂಬ ಮಾತಿಲ್ಲವೊ ಒಂದು ಕಾಸು
ತೆರಿಗೆಯು ಕೊಡಬ್ಯಾಡಿರೋ
ಪರಮ ಕರುಣಿ ಹಯವದನ ವೈಕುಂಠದಿ
ಸರುವ ಮಾನ್ಯವನಿತ್ತು ಶರಣರ ಪೊರೆವನು ೫

೨೦೫

ಅನುಭವದಡುಗೆಯ ಮಾಡಿ, ಅದ
ಕ್ಕನುಭವಿಗಳು ಬಂದು ನೀವೆಲ್ಲ ಕೂಡಿ ಪ.

ತನುವೆಂಬ ಭಾಂಡ[2]ವ ತೊಳೆದು, ಕೆಟ್ಟ
ಮನದ ಚಂಚಲವೆಂಬ ಮುಸುರೆಯ ಕಳೆದು
ಘನವಾಗಿ ಮನೆಯನ್ನು ಬಳಿದು, ಅಲ್ಲಿ
ಮಿನುಗುವ ತ್ರಿಗುಣ[3]ದ ಒಲೆಗುಂಡ ನೆಡೆದು ೧

ವಿರಕ್ತಿಯೆಂಬುವ ಮಡಿಯುಟ್ಟು, ಪೂರ್ಣ
ಹರಿಭಕ್ತಿಯೆಂಬ ನೀರನ್ನೆಸರಿಟ್ಟು
ಅರಿವೆಂ[4]ಬ ಬೆಂಕಿಯ ಕೊಟ್ಟು, ಮಾಯಾ
ಮರೆವೆಂಬ ಕಾಷ್ಠ[5]ವ ಮುದದಿಂದ ಸುಟ್ಟು ೨

ಶರಣೆಂಬ ಸಾಮಗ್ರಿ ಹೂಡಿ, ಮೋಕ್ಷ
ಪರಿಕರ[6]ವಾದಂಥ ಪಾಕವ ಮಾಡಿ
ಗುರುಶರಣರು ಸವಿದಾಡಿ ನಮ್ಮ
ಪುರಂದರವಿಠಲನ ಬಿಡದೆ ಕೊಂಡಾಡಿ ೩

1 ಕ್ಷಾಮ 2 ಪಾತ್ರೆ 3 ಸಾತ್ವಿಕ, ರಾಜಸ, ತಾಮಸ.
4 ಜ್ಞಾನ 5 ಕಟ್ಟಿಗೆ 6 ಸಾಧನ

೨೦೬

ಆಚಾರವಿಲ್ಲದ ನಾಲಿಗೆ, ನಿನ್ನ
ನೀಚಬುದ್ಧಿಯ ಬಿಡು ನಾಲಿಗೆ ಪ.

ವಿಚಾರವಿಲ್ಲದೆ ಪರರ ದೂಷಿಪುದಕ್ಕೆ
ಚಾಚಿಕೊಂಡಿರುವಂಥ ನಾಲಿಗೆ ಅ.ಪ.

ಪ್ರಾತಃಕಾಲದೊಳೆದ್ದು ನಾಲಿಗೆ–ಸಿರಿ
ಪತಿಯೆನ್ನ ಬಾರದೆ ನಾಲಿಗೆ
ಪತಿತ ಪಾವನ ನಮ್ಮ ರತಿಪತಿ ಜನಕ[1]ನ
ಸತತವು ನುಡಿ ಕಂಡ್ಯ ನಾಲಿಗೆ ೧

ಚಾಡಿ ಹೇಳಲಿ ಬೇಡ ನಾಲಿಗೆ–ನಿನ್ನ
ಬೇಡಿಕೊಂಬುವೆನು ನಾಲಿಗೆ
ರೂಢಿಗೊಡೆಯ ಶ್ರೀರಾಮನ ನಾಮವ
ಪಾಡುತಲಿರು ಕಂಡ್ಯ ನಾಲಿಗೆ ೨

ಹರಿಯ ಸ್ಮರಣೆ ಮಾಡು ನಾಲಿಗೆ–ನರ
ಹರಿಯ ಭಜಿಸು ಕಂಡ್ಯ ನಾಲಿಗೆ
ವರದ ಪುರಂದರವಿಠಲರಾಯನ
ಚರಣ ಕಮಲವ ನೆನೆ ನಾಲಿಗೆ ೩

೨೦೭

ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯ ಪ.

ಪದುಮನಾಭನ ಪಾದಭಜನೆ ಸುಖವಯ್ಯ ಅ.ಪ.

---

1 ವಿಷ್ಣು

ಕಲ್ಲಾಗಿ ಇರಬೇಕು ಕಠಿಣ ಭವ[1]ತೊರೆಯೊಳಗೆ
ಬಿಲ್ಲಾಗಿ ಇರಬೇಕು ತನ್ನವರೊಳಗೆ
ಮೆಲ್ಲನೆ ಮಾಧವಗೆ ಮನವ ಮೆಚ್ಚಿಸಬೇಕು
ಬೆಲ್ಲವಾಗಿರಬೇಕು ಬಲ್ಲವರೊಳಗೆ ೧

ಬುದ್ಧಿಯಲಿ ತನುಮನವ ತಿದ್ದಿಕೊಳುತಿರಬೇಕು
ಮುದ್ದಾಗಿ ಇರಬೇಕು ಮುನಿಯೋಗಿಗಳೊಳಗೆ
ಮಧ್ವಮತಾಬ್ಧಿ[2]ಯಲಿ ಮೀನಾಗಿ ಇರಬೇಕು
ಶುದ್ಧನಾಗಿ ತತ್ತ್ವ ಶೋಧಿಸಲಿಬೇಕು ೨

ವಿಷಯ ಭೋಗದ ತೃಣ[3]ಕೆ ಉರಿಯಾಗಿ ಇರಬೇಕು
ನಿಶಿ ಹಗಲು ಶ್ರೀಹರಿಯ ಭಜಿಸಬೇಕು
ವಸುಧೆಯೊಳು ಪುರಂದರವಿಠಲನ ನಾಮವನು
ಹಸನಾಗಿ ನೆನೆನೆನೆದು ಸುಖಿಯಾಗಬೇಕು ೩

೨೦೮

ತಾಸು[4] ಬಾರಿಸುತಿದೆ ಕೇಳಿ ಹರಿದಾಸರೆಲ್ಲ ಪ.

ಶ್ರೀಶನ ಭಜನೆಯ ಮಾಡದ ಮನುಜನ, ಆ
ಯುಷ್ಯ ವ್ಯರ್ಥವು ಹೋಯಿತು ಎಂದು ಅ.ಪ.

ಹಾಸುಮಂಚ ಸುಪ್ಪತ್ತಿಗೆಯಲಿ ಹಗಲು ಇರುಳು
ಹೇಸರ ಕತ್ತೆಯಂತೆ ಹೊರಳಿ, ಸ್ತ್ರೀಯರ ಕೂಡಿ
ಬೇಸರದೆ ನಿತ್ಯ ಉರುಳಿ, ಈ ಪರಿಯಿಂದಲಿ ಮಾನುಷ ಆ-
ಯುಸ್ಸು ವೃಥಾ ವೃಥಾ ಹೋಯಿತು ಹೋಯಿತು ಎಂದು ೧

1 ಜನ್ಮ 2 ಮಧ್ವಮತವೆಂಬ ಸಮುದ್ರ 3 ಹುಲ್ಲು 4 ಗಂಟೆ

ವಾರ್ಧಕ್ಯ ಬಾಲ್ಯ ಕೆಲವು ಕಾಲ, ವಿವೇಕವಿಲ್ಲದ
ಬುದ್ಧಿಮಾಂದ್ಯವು ಕೆಲವು ಕಾಲ, ಅಜ್ಞಾನದಿಂದ
ನಿದ್ರೆಯಿಂದ ಅತಿಲೋಲ, ಈ ಪರಿಯಿಂದಲಿ
ಕಾಲನ ಮನೆಯು ಸಮೀಪವಾಯಿತು ಎಂದು ೨

ಕಂಡ ಕಂಡ ವಿಷಯವ ಕಾಮಿಸಿ, ಕಷ್ಟವ ಪಡದೆ
ತಾಂಡವ ಶ್ರೀಕೃಷ್ಣನ ಭಜಿಸಿ
ಪುಂಡರೀಕಾಕ್ಷನ ಪುರಾಣ ಪುರುಷನ
ಪುರಂದರವಿಠಲನ ಭಜಿಸಿ ಭಜಿಸಿ ಎಂದು ೩

### ೨೦೯

ತನು[1]ವ ನೀರೊಳಗದ್ದಿ ಫಲವೇನು–ತನ್ನ
ಮನದಲ್ಲಿ ದೃಢಭಕ್ತಿಯಿಲ್ಲದ ಮನುಜನು ಪ.

ದಾನಧರ್ಮಗಳನ್ನು ಮಾಡುವುದೆ ಸ್ನಾನ
ಜ್ಞಾನ ತತ್ವಂಗಳ ತಿಳಿವುದೆ ಸ್ನಾನ
ಹೀನ ಪಾಶಂಗಳ ಹರಿವುದೆ ಸ್ನಾನ
ಧ್ಯಾನದಿ ಮಾಧವನ ನೋಡುವುದೆ ಸ್ನಾನ ೧

ಗುರುಗಳ ಶ್ರೀಪಾದತೀರ್ಥವೆ ಸ್ನಾನ
ಹಿರಿಯರ ದರ್ಶನ ಮಾಡುವುದೆ ಸ್ನಾನ
ಕರೆದು ಅತಿಥಿಗೆ ಅನ್ನ ಇಡುವುದೆ ಸ್ನಾನ
ನರಹರಿ ಚರಣವ ನಂಬುವುದೆ ಸ್ನಾನ ೨

1 ಶರೀರ

ದುಷ್ಟರ ಸಂಗ ಬಿಡುವುದೆ ಸ್ನಾನ
ಶಿಷ್ಟರ ಸಹವಾಸ ಮಾಡುವುದೆ ಸ್ನಾನ
ಸೃಷ್ಟಿಯೊಳಗೆ ಸಿರಿ ಪುರಂದರವಿಠಲನ
ಮುಟ್ಟಿ ಭಜಿಸಿ ಪುಣ್ಯ ಪಡೆವುದೆ ಸ್ನಾನ ೩

೨೧೦

ಗುರುವಿನ ಗುಲಾಮನಾಗುವತನಕ
ದೊರೆಯದಣ್ಣ ಮುಕುತಿ ಪ.

ಪರಿಪರಿ ಶಾಸ್ತ್ರವ ನೋಡಿದರೇನು
ವ್ಯರ್ಥವಾಯಿತು ಯುಕುತಿ ಅ.ಪ.

ಆರು ಶಾಸ್ತ್ರ[1]ವನೋದಿದರೇನು ಮೂ
ರಾರು ಪುರಾಣ[2] ಮುಗಿಸಿದರೇನು
ಸಾರಿ ಸಜ್ಜನರ ಸಂಗವ ಮಾಡದೆ
ಧೀರನೆಂದು ತಾ ತಿರುಗಿದರೇನು ೧

ಕೊರಳೊಳು ಮಾಲೆಯ ಧರಿಸಿದರೇನು
ಬೆರಳೊಳು ಜಪಮಣಿ ತಿರುವಿದರೇನು
ಮರಳಿ ಮರಳಿ ತಾ ಹೊರಳಿ ಬೂದಿಯೊಳು
ಮರುಳನಂದದಿ ತಿರುಗಿದರೇನು ೨

1 ಷಡ್ದರ್ಶನ 2 ಹದಿನೆಂಟು ಪುರಾಣಗಳು

ಧಾರುಣಿಯೆಲ್ಲ ಆಳಿದರೇನು ಶ
ರೀರ ಸುಖವನು ಬಿಡಿಸಿದರೇನು
ಮಾರಜನಕ ಸಿರಿ ಪುರಂದರವಿಠಲನ
ಸಾರ ಮಹಿಮೆಗಳ ತೋರಬಲ್ಲ ೩

೨೧೧

ಉಗಾಭೋಗ

ಹೇಗೆ ಬರೆದೀತು ಪ್ರಾಚೀನದಲ್ಲಿ
ಹಾಗೆ ಇರಬೇಕು ಸಂಸಾರದಲ್ಲಿ
ಪಕ್ಷಿ ಕೂತಿತು ಬಂದು ಅಂಗಳದಲ್ಲಿ
ಹಾರಿಹೋಯಿತು ಆ ಕ್ಷಣದಲ್ಲಿ
ಆಡುವ ಮಕ್ಕಳು ಮನೆ ಕಟ್ಟಿದರು
ಆಟ ಸಾಕೆಂದು ಮುರಿದೋಡಿದರು
ಸಂತೆ ನೆರೆದೀತು ನಾನಾ ಪರಿ
ತಿರುಗಿ ಹೋಯಿತು ತಮ್ಮ ತಮ್ಮ ದಾರಿ
ಪಸ್ತಿಕಾರನು ಪಸ್ತಿಗೆ ಬಂದ
ಹೊತ್ತಾರೆ ಎದ್ದು ಊರಿಗೆ ಹೋದ
ಈ ಸಂಸಾರ ಮಾಯಾ ಬಿಡಿಸಿ
ಕಾಯೋ ಪುರಂದರವಿಠಲ

೨೧೨

ಕಾಗದ ಬಂದಿದೆ. ನಮ್ಮ ಕಮಲನಾಭನದು ಈ
ಕಾಗದವನ್ನು ಓದಿಕೊಂಡು ಕಾಲವ ಕಳೆಯಿರೋ ಪ.

ಕಾಮ ಕ್ರೋಧವ ಬಿಡಿರೆಂಬೊ ಕಾಗದ ಬಂದಿದೆ
ನೇಮ ನಿಷ್ಠೆಯೊಳಿರಿರೆಂಬೊ ಕಾಗದ ಬಂದಿದೆ
ತಾಮಸ ಜನರ ಕೂಡದಿರೆಂಬೊ ಕಾಗದ ಬಂದಿದೆ
ನಮ್ಮ ಕಾಮನಯ್ಯನು ತಾನೆ ಬರೆದ ಕಾಗದ ಬಂದಿದೆ ೧

ಹೆಣ್ಣಿನಾಸೆ ಬಿಡಿರೆಂಬೊ ಕಾಗದ ಬಂದಿದೆ
ಹೊನ್ನಿನಾಸೆ ಬಿಡಿರೆಂಬೊ ಕಾಗದ ಬಂದಿದೆ
ಮಣ್ಣಿನಾಸೆ ಬಿಡಿರೆಂಬೊ ಕಾಗದ ಬಂದಿದೆ
ಕಮಲನಾಭನು ತಾನೆ ಬರೆದ ಕಾಗದ ಬಂದಿದೆ ೨

ಗೆಜ್ಜೆ ಕಾಲ್ಕಟ್ಟಿರೆಂಬೊ ಕಾಗದ ಬಂದಿದೆ
ಹೆಜ್ಜೆ ಹೆಜ್ಜೆಗೆ ಹರಿಯೆನ್ನಿರೆಂಬೊ ಕಾಗದ ಬಂದಿದೆ
ಲಜ್ಜೆ ಬಿಟ್ಟು ಕುಣಿಯಿರೆಂಬೊ ಕಾಗದ ಬಂದಿದೆ
ಪುರಂದರವಿಠಲ ತಾನೆ ಬರೆದ ಕಾಗದ ಬಂದಿದೆ ೩

೨೧೩

ಆರು ಹಿತವರು ನಿನಗೆ ಮೂರು ಮಂದಿಗಳೊಳಗೆ ಪ.

ನಾರಿಯೋ ಧಾರುಣಿಯೋ ಬಲು ಧನದ ಸಿರಿಯೋ ಅ.ಪ.

ಅನ್ಯರಲಿ ಜನಿಸಿರ್ದ ಅಂಗನೆಯು ಕರೆತಂದು
ತನ್ನ ಮನೆಗವಳ ಯಜಮಾನಿ ಎನಿಸಿ
ಭಿನ್ನವಿಲ್ಲದೆ ಅರ್ಧ ದೇಹವೆನಿಸುವ ಸತಿಯು
ಕಣ್ಣಿನಲಿ ನೋಡಲಮ್ಮಳು ಕಾಲವಶದಿ ೧

ಮುನ್ನ ಶತಕೋಟಿ ರಾಯರುಗಳಾಳಿದ ನೆಲನ
ತನ್ನದೆಂದೆನುತ ಶಾಸನವ ಬರೆಸಿ
ಬಿನ್ನಣದ ಮನೆಕಟ್ಟಿ ಕೋಟೆ ಕೊತ್ತಳವಿಕ್ಕಿ
ಚಿನ್ನಿಗನು ಆಸುವಳಿಯೆ ಹೊರಗೆ ಹಾಕುವರು ೨

ಉದ್ಯೋಗ ವ್ಯವಹಾರ ನೃಪಸೇವೆ ಕುಶಲ ಗತಿ
ಕ್ಷುದ್ರತನ ಕಳುವು ಪರದ್ರೋಹದಿಂದ
ಬುದ್ಧಿಯಿಂದಲಿ ಗಳಿಸಿ ಇಟ್ಟಿದ್ದ ಅರ್ಥವನು
ಸದ್ಯದಲಿ ಆರುಂಬುವರು ಪೇಳೋ ಮನುಜಾ ೩

ಶೋಕವನು ಗೈಯುವರು ಸತಿಸುತರು ಬಾಂಧವರು
ಜೋಕೆ ತಪ್ಪಿದ ಬಳಿಕ ಅರ್ಥ ವ್ಯರ್ಥ
ಲೋಕದೊಳು ಗಳಿಸಿರ್ದ ಪುಣ್ಯ ಪಾಪಗಳೆರಡು
ಸಾಕಾರವಾಗಿ ಸಂಗಡ ಬಾಹೊವಲ್ಲದೆ ೪

ಅಸ್ಥಿರದ ದೇಹವನು ನೆಚ್ಚಿ ನೀ ಕೆಡಬೇಡ
ಸ್ವಸ್ಥದಲಿ ನೆನೆ ಕಂಡ್ಯ ಪರಮಾತ್ಮನ
ಚಿತ್ತ ಶುದ್ಧಿಯಿಂದ ಪುರಂದರವಿಠಲನ
ಉತ್ತಮೋತ್ತಮನೆಂದು ಸುಖಿಯಾಗೊ ಮನುಜ ೫

೨೧೪

ಎಲ್ಲ ನೋಡಿದರಲ್ಲಿ ರಾಮ, ಇದು
ಬಲ್ಲ ಜಾಣರ ದೇಹದಲ್ಲಿ ನೋಡಣ್ಣ ಪ.

ಕಣ್ಣೇ ಕಾಮನ ಬೀಜ–ಈ
ಕಣ್ಣಿಂದಲೆ ನೋಡು ಮೋಕ್ಷ ಸಾಮ್ರಾಜ್ಯ
ಕಣ್ಣಿನ ಮೂರುತಿ ಬಿಗಿದು–ಒಳ
ಗಣ್ಣಿಂದಲೆ ದೇವರ ನೋಡಣ್ಣ ೧

ಮೂಗೇ ಶ್ವಾಸ ನಿಶ್ವಾಸ-ಈ
ಮೂಗಿಂದಲೆ ಕಾಣೊ ಯೋಗ ಸಂನ್ಯಾಸ
ಮೂಗನಾದರೆ ವಿಶೇಷ–ಒಳ
ಮೂಗಿಲಿ ನೋಡಣ್ಣ ಲೀಲಾವಿಲಾಸ ೨

ಕಿವಿಯೇ ಧರ್ಮಕೆ ದ್ವಾರ–ಈ
ಕಿವಿಯಿಂದಲೆ ಕೇಳೊ ಮೋಕ್ಷದ ಸಾರ
ಕಿವಿಯೇ ಕರ್ಮಕುಠಾರ[1]–ಒಳ
ಗಿವಿಯಲ್ಲಿ ಕಾಣೋ ನಾದದ ಬೇರ ೩

ಬೊಮ್ಮ ಮಾಡಿದ ತನು ಬಿಟ್ಟು–ವಿಶ್ವ
ಕರ್ಮನು ಮಾಡಿದ ಬೊಮ್ಮ[2]ಯನಿಟ್ಟು
ಸುಮ್ಮನೆ ಕೂಗುಗಳಿಟ್ಟು-ಅದ
ನಮ್ಬುವನೆಂಬೋನೆ ಹೋಹ ಕಂಗೆಟ್ಟು ೪

ರೂಢಿಯೊಳಗೆ ಶುದ್ಧ ಮೂಢ–ಈ
ಕಾಡುಕಲ್ಲುಗಳನ್ನು ನಂಬಲಿ ಬೇಡ
ನಾಡಾಡಿ[3] ದೈವಗಳೆಲ್ಲ ನಮ್ಮ
ಬಡದಾದಿಕೇಶವನೊಬ್ಬನೆ ಬಲ್ಲ ೫

---

1 ಕೊಡಲಿ 2 ಗೊಂಬೆ 3 ಸಾಮಾನ್ಯ

೨೧೫

ಸಾಧನಕೆ ಬಗಗಾಣೆನೆನ್ನಬಹುದೆ ಪ.

ಸಾದರದಿ ಗುರುಕರುಣ ತಾ ಪಡೆದ ಬಳಿಕ ಅ.ಪ.

ಕಂಡಕಂಡದ್ದೆಲ್ಲ ಕಮಲನಾಭನ ಮೂರ್ತಿ
ಉಂಡು ಉಟ್ಟದ್ದೆಲ್ಲ ವಿಷ್ಣು ಪೂಜೆ
ತಂಡತಂಡದ ವಾರ್ತೆ ವಾರಿಜಾಕ್ಷನ ಕೀರ್ತಿ
ಹಿಂಡು ಮಾತುಗಳೆಲ್ಲ ಹರಿಯ ನಾಮ ೧

ವಾಗತ್ಯ[1]ಪಡುವುದೆ ವಿಧಿನಿಷೇಧಾಚರಣೆ
ರೋಗಾನುಭವವೆಲ್ಲ ಉಗ್ರತಪವು
ಆಗದವರಾಡಿ ಕೊಂಬುವುದೆ ಆಶೀರ್ವಾದ
ಬೀಗರುಪಚಾರವೇ ಭೂತದಯವು ೨

ಮೈಮರೆತು ಮಲಗುವುದೆ ಧರಣಿಗೆ ನಮಸ್ಕಾರ
ಕೈವಿಾರಿ ಹೋದದ್ದೆ ಕೃಷ್ಣಾರ್ಪಣ
ಮೈ ಮನೋವೃತ್ತಿಗಳೆ ವಿಷಯದಲಿ ವೈರಾಗ್ಯ
ಹೊಯ್ಮಾಲಿತನವೆಲ್ಲ[2]ವೆಲ್ಲ ಹರಿಯ ವಿಹಾರ ೩

ಹಿಡಿದ ಹಠ ಪೂರೈಸಲದು ಹರಿಯ ಸಂಕಲ್ಪ
ನಡೆದಾಡುವೋದಲ್ಲ ತೀರ್ಥಯಾತ್ರೆ
ಬಡತನವು ಬರಲದೇ ಭಗವದ್ಭಜನೆಯೋಗ
ಸಡಗರದಲಿಪ್ಪುದೆ ಶ್ರೀಶನಾಜ್ಞೆ ೪

---

1 ಕಟ್ಟಳೆಗೆ ವಿರುದ್ಧ 2 ವೈಮಾನಿಕತನ (?); ಮರೆಯುವಿಕೆ(?)

ಬುದ್ಧಿಸಾಲದೆ ಸುಮ್ಮನಿರುವುದೇ ಸಮ್ಮತವು
ಯದೃಚ್ಛಾಲಾಭ[1]ವೇ ಸುಖವುಯೆನಲು
ಮಧ್ವಾಂತರ್ಗತ ಶ್ರೀವಿಜಯವಿಠಲರೇಯ
ಹೃದ್ಗದಾರ್ಥವ ತಿಳಿದು ಒಪ್ಪಿಸಿಕೊಳನೆ ೫

೨೧೬

ಮನವ ಶೋಧಿಸಬೇಕು ನಿಚ್ಚ[2], ದಿನ
ದಿನ ಮಾಡುವ ಪಾಪ ಪುಣ್ಯದ ವೆಚ್ಚ ಪ.

ಧರ್ಮ ಅಧರ್ಮ ವಿಂಗಡಿಸಿ, ಅ
ಧರ್ಮದ ನರಗಳ ಬೇರ ಕತ್ತರಿಸಿ
ನಿರ್ಮಲಾಚಾರದಿ ಚರಿಸಿ, ಪರ
ಬೊಮ್ಮ[3]ಮೂರುತಿ ಪಾದಕಮಲವ ಭಜಿಸಿ ೧

ತನುವ ಖಂಡಿಸಿ ಒಮ್ಮೆ ಮಾಣೋ[4], ನಿನ್ನ
ಮನವ ದಂಡಿಸಿ ಪರಮಾತ್ಮನ್ನ ಕಾಣೋ
ಕೊನೆಗೆ ನಿನ್ನೊಳು ನೀ ಜಾಣೊ, ಮುಕ್ತಿ
ನಿನಗೆ ದೂರಿಲ್ಲವು ಒಂದೆ ಗೇಣೋ ೨

ಆತನ ಭಕುತರಿಗೆ ಕೇಡಿಲ್ಲ, ಅವ
ಪಾತಕ[5] ಪತಿತ[6] ಸಂಗವ ಮಾಡ್ವನಲ್ಲ
ನೀತಿವಂತರು ಕೇಳಿರೆಲ್ಲ, ನಮ
ಗಾತನೆ ಗತಿ ಈವ[7] ಪುರಂದರವಿಠಲ ೩

1 ದೊರೆತಷ್ಟರಲ್ಲಿ ತೃಪ್ತಿಪಡೆಯುವುದು 2 ನಿತ್ಯ 3 ಪರಬ್ರಹ್ಮ
4 ತ್ಯಜಿಸು 5 ನೀಚ 6 ಪಾಪಿ 7 ಕೊಡುವ

 

## ೨೧೭

ತಾಳುವಿಕೆಗಿಂತ ತಾಪವು ಇಲ್ಲ ಪ.
ಕೇಳಬಲ್ಲವರಿಗೆ ಹೇಳುವೆನು ಸೊಲ್ಲ ಅ.ಪ.

ದುಷ್ಟಮನುಜರು ಪೇಳ್ವ ನಿಷ್ಠುರದ ನುಡಿ ತಾಳು
ಕಷ್ಟ ಬಂದರೆ ತಾಳು, ಕಂಗೆಡದೆ ತಾಳು
ನೆಟ್ಟ ಸಸಿ ಫಲ ಬರುವತನಕ ಶಾಂತಿಯು ತಾಳು
ಕಟ್ಟು ಬುತ್ತಿಯ ಮುಂದೆ ಉಣಲುಂಟು ತಾಳು ೧

ಹಳಿದು ಹಂಗಿಸುವ ಹಗೆಯ ಮಾತನು ತಾಳು
ಸುಳಿನುಡಿ ಕುಹಕ ಕುಮಂತ್ರವನು ತಾಳು
ಅಳುಕದಲೆ ಬಿರುಸು ಬಿಂಕದ ನುಡಿಯು ನೀ ತಾಳು
ಹಲಧರಾನುಜ[1]ನನ್ನು ಹೃದಯದಲಿ ತಾಳು ೨

ನಕ್ಕು ನುಡಿವರ ಮುಂದೆ ಮುಕ್ಕ(ಗ್ಗ?)ರಿಸ[2]ದೆ ತಾಳು
ಅಕ್ಕಸ[3]ವ ಮಾಡುವರ ಆಕ್ಕರದಿ ತಾಳು
ಉಕ್ಕೋ ಹಾಲಿಗೆ ನೀರು ಇಕ್ಕಿದಂದದಿ ತಾಳು
ಪಕ್ಷೀಶ ಹಯವದನ ಶರಣೆಂದು ಬಾಳು ೩

## ೨೧೮

ಮಾನವ ಜನ್ಮ ದೊಡ್ಡದು–ಇದ
ಹಾನಿಮಾಡಲಿಬೇಡಿ ಹುಚ್ಚಪ್ಪಗಳಿರ ಪ.

---

1 ಬಲರಾಮನ ತಮ್ಮನಾದ ಕೃಷ್ಣ 2 ಎಡವದ 3 ಆಕ್ರೋಶ

ಕಣ್ಣು ಕೈ ಕಾಲ್ಕಿವಿ ನಾಲಿಗೆ ಇರಲಿಕ್ಕೆ
ಮಣ್ಣು ಮುಕ್ಕಿ ಮರುಳಾಗುವರೆ
ಹೆಣ್ಣು ಮಣ್ಣಿಗಾಗಿ ಹರಿಯ ನಾಮಾಮೃತ
ಉಣ್ಣದೆ ಉಪವಾಸ ಇರುವರೆ ಖೋಡಿ[1] ೧

ಕಾಲನ ದೂತರು ಕಾಲ್ಪಿಡಿದೆಳೆವಾಗ
ತಾಳು ತಾಳೆಂದರೆ ತಾಳುವರೆ
ದಾಳಿ ಬಾರದ ಮುನ್ನ ಧರ್ಮವ ಗಳಿಸಿರೊ
ಸುಳ್ಳಿನ ಸಂಸಾರ ಸುಳಿಗೆ ಸಿಕ್ಕಲು ಬ್ಯಾಡಿ ೨

ಏನು ಕಾರಣ ಯದುಪತಿಯನು ಮರೆತಿರಿ
ಧನ ಧಾನ್ಯ ಪುತ್ರರು ಕಾಯುವರೆ
ಇನ್ನಾದರು ಏಕೋಭಾವದಿ[2] ಭಜಿಸಿರೋ
ಚೆನ್ನ ಶ್ರೀ ಪುರಂದರವಿಠಲರಾಯನ ೩

## ೨೧೯

ಧರ್ಮವೇ ಜಯವೆಂಬ ದಿವ್ಯ ಮಂತ್ರ ಪ.
ಮರ್ಮ[3]ವನರಿತು ಮಾಡಲಿಬೇಕು ತಂತ್ರ[4] ಅ.ಪ.

ವಿಷವಿಕ್ಕಿದವಗೆ ಷಡ್ರಸವನುಣಿಸಲಿಬೇಕು
ದ್ವೇಷಮಾಡಿದವನ ಪೋಷಿಸಲಿಬೇಕು
ಪುಸಿ ಮಾಡಿ ಕೆಡಿಸುವನ ಹಾಡಿ ಹರಸಲಿಬೇಕು
ಮೋಸಮಾಡುವನ ಹೆಸರು ಮಗನಿಗಿಡಬೇಕು ೧

1 ಹುಚ್ಚ, ಬೆಪ್ಪ. 2 ಒಂದೇ ಮನಸ್ಸು .3 ರಹಸ್ಯ, ಒಳಗುಟ್ಟು. 4 ಕ್ರಿಯೆ

ಹಿಂದೆ ನಿಂದಿಪರನ್ನು ವಂದಿಸುತಲಿರಬೇಕು
ಬಂಧನದೊಳಿಟ್ಟವರ ಬೆರೆಯಬೇಕು
ಕೊಂದ ವೈರಿಯ ಮನೆಗೆ ನಡೆದುಹೋಗಲಿಬೇಕು
ಕುಂದೆಣಿಸುವವರ ಗೆಳೆತನ ಮಾಡಬೇಕು ೨

ಕೊಂಡೊಯ್ದು ಬಡಿಯುವರ ಕೊಂಡಾಡುತಿರಬೇಕು
ಕಂಡು ಸಹಿಸದವರ ಕರೆಯಬೇಕು
ಪುಂಡರೀಕಾಕ್ಷ ಶ್ರೀಪುರಂದರವಿಠಲನ
ಕೊಂಡಾಡಿ ತಾ ಧನ್ಯನಾಗಬೇಕು ೩

೨೨೦

ಸತ್ಯವೆಂಬುದೆ ಸ್ನಾನ, ಉಪವಾಸ, ಜಪ, ನೇಮ, ಅ
ಸತ್ಯದಲಿ ಮಾಡುವ ಕರ್ಮ ವ್ಯರ್ಥ ಪ.

ಅಪ್ಪಳಿಸಿ ಪರರ ಒಡವೆಗಳ ತಂದುಂಡು ತಾ
ಒಪ್ಪದಿಂದುಪವಾಸ ವ್ರತವ ಮಾಡಿ
ತಪ್ಪದಲೆ ಸ್ವರ್ಗವನು ಸೂರೆಗೊಂಬುವೆನೆಂಬೆ
ಸರ್ಪಗಳು ಮಾಡಿದ ಅಪರಾಧವೇನಯ್ಯ ೧

ಬಿಡದೆ ಮದ ಮತ್ಸರಾ[1]ಹಂಕಾರದಲಿ ಮುಳುಗಿ
ಒಡನೆ ಬೆರಳುಗಳೆಣಿಸಿ ಮೌನದಿಂದ
ತಡೆಯದಲೆ ಪರಲೋಕ ಸೂರೆಗೊಂಬುವೆನೆಂಬೆ
ಒಡ ಬಕನು ಮಾಡಿದ ಅಪರಾಧವೇನಯ್ಯ ೨

---

1 ಅಸೂಯೆ

ಪರಸತಿಯು ಪರಧನವು ಪರನಿಂದೆ ಪರಹಿಂಸೆ
ಪರಮ ಪಾತಕದ ಕಾರಣವೆಂದು ತಿಳಿದು
ಧರೆಗಧಿಕ ಪುರಂದರವಿಠಲನ ಚರಣವನು
ನೆರೆ ಭಜಿಸಿ ಸುಖಿಯಾಗಿ ಬಾಳಲವೊ ಮನುಜ ೩

## ೨೨೧

ಈಸ[1]ಬೇಕು ಇದ್ದು ಜೈಸಬೇಕು ಪ.

ಹೇಸಿಗೆ[2] ಸಂಸಾರದಲಿ ಆಶಾ ಲೇಶ ಮಾಡದ್ಹಾಂಗೆ ಅ.ಪ.

ತಾಮರಸ[3] ಜಲದಂತೆ ಪ್ರೇಮವಿಟ್ಟು ಭವದೊಳು
ಸ್ವಾಮಿ ರಾಮನೆನುತ ಪಾಡಿ ಕಾಮಿತ ಕೈಕೊಂಬರೆಲ್ಲ ೧

ಗೇರು ಹಣ್ಣಿನಲ್ಲಿ ಬೀಜ ಸೇರಿದಂತೆ ಸಂಸಾರದಿ
ಮಾರಿ ಆಸೆ ಮಾಡದ್ಹಾಂಗೆ ಧೀರ ಕೃಷ್ಣನ ನೆನೆವರೆಲ್ಲ ೨

ಮಾಂಸದಾಸೆಗೆ ಮತ್ಸ್ಯ ಸಿಲುಕಿ ಹಿಂಸೆಪಟ್ಟ ಪರಿಯಂತೆ
ಮೋಸ ಹೋಗದ್ಹಾಂಗೆ ಜಗದೀಶ ಪುರಂದರವಿಠಲನೆನುತ ೩

## ೨೨೨

ಕುಲ ಕುಲ ಕುಲವೆನ್ನುತಿಹರು
ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ ಪ.

---

1 ಈಜು 2 ಅಸಹ್ಯ 3 ತಾವರೆ

ಕೆಸರೊಳು ತಾವರೆ ಪುಟ್ಟಲು ಅದ ತಂದು
ಬಿಸಜನಾಭ[1]ನಿಗರ್ಪಿಸಲಿಲ್ಲವೆ
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆ[2]ಯೊಳಗೆ ಭೂಸುರರುಣ್ಣಲಿಲ್ಲವೆ ೧

ಮೃಗಗಳ ಮೈಯಲ್ಲಿ ಪುಟ್ಟಲು ಕಸ್ತೂರಿ
ತೆಗೆದು ಪೂಸು[4]ವರು ದ್ವಿಜರೆಲ್ಲರು
ಒಗೆ[5]ಯಿಂದ ನಾರಾಯಣನಾವ ಕುಲವಯ್ಯ
ಜಗವಲ್ಲಭನಾವ ಕುಲ ಪೇಳಿರಯ್ಯ ೨

ಆತ್ಮ ಯಾವ ಕುಲ, ಜೀವ ಯಾವ ಕುಲ
ತತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ ಮಹಾತ್ಮನು ನೆಲೆಯಾದಿಕೇಶವ
ಆತನೊಲಿದ ಮೇಲೆ ಯಾತರ ಕುಲವಯ್ಯ ೩

೨೨೩

ತಲ್ಲಣಿಸದಿರು ಕಂಡ್ಯ ತಾಳು ಮನವೆ ಪ.

ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ಅ.ಪ.

ಬೆಟ್ಟದ ತುದಿಯಲ್ಲಿ ಹುಟ್ಟಿರುವ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆ[6]ದವರು ಯಾರೊ
ಪುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾದ ಮೇಲೆ
ಗಟ್ಟ್ಯಾಗಿ ಸಲಹುವನು ಇದಕೆ ಸಂಶಯಬೇಡ ೧

1 ಪದ್ಮನಾಭ 2 ಭೂಮಿ 3 ಬ್ರಾಹ್ಮಣರು 4 ಬಳಿದುಕೊಳ್ಳುವುದು
5 ಹುಟ್ಟು 6 ಸುರಿಸುವುದು, ಹಾಕಿದವರು

ಅಡವಿಯೊಳಗಾಡುವ ಮೃಗಪಕ್ಷಿಗಳಿಗೆಲ್ಲ
ಅಡಿಗಡಿಗೆ ಆಹಾರವಿತ್ತವರು ಯಾರೊ
ಪಡೆದ ಜನನಿಯ ತೆರದೆ ಸ್ವಾಮಿ ಹೊಣೆಗಾಡಾಗಿ
ಬಿಡದೆ ರಕ್ಷಿಪನಿದಕೆ ಸಂದೇಹಬೇಡ ೨

ಕಲ್ಲೊಳಗೆ ಹುಟ್ಟಿಕೂಗುವ ಕಪ್ಪೆಗಳಿಗೆಲ್ಲ
ಅಲ್ಲಲ್ಲಿಗಾಹಾರವಿತ್ತವರು ಯಾರೊ
ಬಲ್ಲಿದನು ಕಾಗಿನೆಲೆಯಾದಿಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ೩

# ಅನುಬಂಧ ೧

## ಕೃತಿಗಳ ಮೊದಲ ಸಾಲಿನ ಆಕಾರಾದಿ

ಇ



ಈ

## ಉ



## ಎ

## ಗ



## ಜ



## ತ

## ದ



## ಧ

## ನ

## ಪ



## ಬ

## ಭ



## ಮ

## ಯ



## ರ



## ಲ

## ವ



## ಶ



## ಸ

## ಹ

## ಸಂಕೇತಗಳ ವಿವರ

ಉ : ಉಗಾಭೋಗ ಸು : ಸುಳಾದಿ

## ಅಂಕಿತಗಳ ವಿವರ

| | | | |
|---|---|---|---|
| 1 | ಆದಿಕೇಶವ (ಕನಕಪ್ಪ) | : | ಕನಕದಾಸರು |
| 2 | ಗುರುಗೋಪಾಲ ವಿಠಲ | : | ಗೋಪಾಲದಾಸರ ತಮ್ಮ |
| 3 | ಗೋಪಾಲವಿಠಲ | : | ಗೋಪಾಲದಾಸರು |
| 4 | ಜಗನ್ನಾಥವಿಠಲ | : | ಜಗನ್ನಾಥದಾಸರು |
| 5 | ಪುರಂದರವಿಠಲ | : | ಪುರಂದರದಾಸರು |
| 6 | ಪ್ರಸನ್ನವೆಂಕಟ | : | ಪ್ರಸನ್ನವೆಂಕಟದಾಸರು |
| 7 | ಮಹಿಪತಿ (ದಾಸಮಹಿಪತಿ) | : | ಮಹಿಪತಿರಾಯರು |
| 8 | ರಂಗವಿಠಲ | : | ಶ್ರೀಪಾದರಾಜರು |
| 9 | ವಾಸುದೇವವಿಠಲ | : | ವ್ಯಾಸತತ್ತ್ವಜ್ಞರು |
| 10 | ವಿಜಯವಿಠಲ | : | ವಿಜಯದಾಸರು |
| 11 | ವೇಣುಗೋಪಾಲ | : | ಶ್ರೀ ರಾಘವೇಂದ್ರತೀರ್ಥರು |
| 12 | ವೇಣುಗೋಪಾಲವಿಠಲ | : | ಪಂಗನಾಮದ ತಿಮ್ಮಣ್ಣದಾಸರು |
| 13 | ಶ್ರೀಕೃಷ್ಣ | : | ಶ್ರೀವ್ಯಾಸರಾಯರು |
| 14 | ಶ್ರೀದವಿಠಲ | : | ಕರ್ಜಗಿ ದಾಸಪ್ಪ |
| 15 | ಹಯವದನ | : | ಶ್ರೀವಾದಿರಾಜರು |
| 16 | ಹೆಳವನಕಟ್ಟೆ ರಂಗ | : | ಹೆಳವನಕಟ್ಟೆ ಗಿರಿಯಮ್ಮ |

# ಅನುಬಂಧ ೨

## ಪೂರ್ವಕಥೆಗಳ ಪರಿಚಯ

**ಅಜಾಮಿಳ**

(ಕೀ. 1-ನು. 3) (ಕೀ. 7-ನು. 3) (ಕೀ. 13-ನು. 3) (ಕೀ. 97–ನು. 1) (ಕೀ.140-ನು.3) (ಕೀ.142-ನು.2): ಈತ ಕನ್ಯಾಕುಬ್ಜದಲ್ಲಿದ್ದ ಒಬ್ಬ ಬ್ರಾಹ್ಮಣ. ಈತ ತನ್ನ ಮತ ನಿಷ್ಠೆಗೆ ವಿರುದ್ಧವಾಗಿ, ಶೂದ್ರ ಸ್ತ್ರೀಯೊಬ್ಬಳೊಂದಿಗೆ ಸಂಪರ್ಕ ಬೆಳೆಸಿ ಅತ್ಯಂತ ದುರಾಚಾರಿಯೆನ್ನಿಸಿದನು. ಇಂಥ ಪಾಪಿಷ್ಠನು, ತನ್ನ ಮರಣ ಕಾಲದಲ್ಲಿ ತನ್ನ ಮಗನಾದ ನಾರಾಯಣನನ್ನು ಕೂಗಿ ಕರೆದುದರಿಂದ, ಅವನಿಗೆ ಹರಿನಾಮ ಸ್ಮರಣೆಯ ಪುಣ್ಯ ಪ್ರಾಪ್ತವಾಯಿತು(ಭಾಗವತ vi–ಅ. 1).

**ಕರಿರಾಜ ಕಷ್ಟದಲಿ ಆದಿಮೂಲಾಯೆಂದು ಕರೆಯಲಾಕ್ಷಣ ಬಂದು ಒದಗಿ ಗಿದೆಯೊ ನರಹರಿಯೆ**

(ಕೀ. 17_ನು. 1) (ಕೀ. 20-ನು. 4) (ಕೀ. 51–ನು.1) (ಕೀ. 136-ನು. 1) (ಕೀ. 140-ನು. 4) (ಕೀ. 142-ನು. 2) : ಇದು ಸುಪ್ರಸಿದ್ಧವಾದ ಗಜೇಂದ್ರ ಮೋಕ್ಷದ ಕಥೆ. ಪಾಂಡ್ಯದೇಶದ ದೊರೆಯಾದ ಇಂದ್ರದ್ಯುಮ್ನನು ಒಬ್ಬ ವಿಷ್ಣು ಭಕ್ತ. ಒಮ್ಮೆ ಅಗಸ್ತ್ಯ ಮಹರ್ಷಿಗಳು ತನ್ನಲ್ಲಿಗೆ ಬಂದಾಗ ಅವರನ್ನು ಸೂಕ್ತವಾಗಿ ಸತ್ಕರಿಸದೆ ಹೋದುದರಿಂದ ಅವರಿಂದ ಶಾಪಗ್ರಸ್ತನಾಗಿ ಆನೆಯ ಜನ್ಮವನ್ನು ಪಡೆದನು. ಈ ಆನೆ ತನ್ನ ಪರಿವಾರದೊಂದಿಗೆ ಒಂದು ಕೊಳದಲ್ಲಿ ನೀರು ಕುಡಿಯುತ್ತಿರಲು ಆಗ ಅಲ್ಲಿದ್ದ ಮೊಸಳೆಯೊಂದು ಅದರ ಕಾಲನ್ನು ಬಲವಾಗಿ ಹಿಡಿಯಿತು ಉಳಿದ ಆನೆಗಳೆಲ್ಲ ಭಯಗ್ರಸ್ತವಾಗಿ ಓಡಿಹೋದುವು. ಆಗ ಗಜೇಂದ್ರನು ತನ್ನ ಪೂರ್ವಜನ್ಮ ಸಂಸ್ಕಾರದಿಂದ ವಿಷ್ಣುವಿಗೆ ಮೊರೆಯಿಡಲು, ಪರಮಾತ್ಮನು ಅವತರಿಸಿ, ತನ್ನ ಚಕ್ರದಿಂದ ಮೊಸಳೆಯನ್ನು ಸಂಹರಿಸಿ, ಗಜೇಂದ್ರನನ್ನು ಸಂರಕ್ಷಿಸಿದನು. (ಭಾಗವತ viii–ಅ. 1).

ಕಡುಕೋಪದಿಂ ಖಳನು ಖಡ್ಗವನೆ ಹಿಡಿದು ನಿನ್ನೊಡೆಯನೆಲ್ಲಿಹನೆಂದು ನುಡಿಯೆ

(ಕೀ. 17-ನು. 2) (ಸು. 120) (ಕೀ. 140-ನು. 5) (ಕೀ. 142-ನು. 1:) ಹಿರಣ್ಯಕಶಿಪು ತನ್ನ ಮಗನಾದ ಪ್ರಹ್ಲಾದನ ವಿಷ್ಣುಭಕ್ತಿಗೆ ಕೆರಳಿ ಅವನನ್ನು ನಾನಾ ಬಗೆಯಾಗಿ ದಂಡಿಸಿದನು. ಪ್ರಹ್ಲಾದನು ಯಾವುದಕ್ಕೂ ಸಗ್ಗದಿರಲು, ಕಡೆಗೆ ಕಂಬ ವೊಂದನ್ನು ತೋರಿಸಿ, ಅಲ್ಲಿ ವಿಷ್ಣುವನ್ನು ತೋರಿಸೆಂದು ಗರ್ಜಿಸಿದನು. ಪ್ರಹ್ಲಾದನಾದರೋ ತನ್ನ ಸ್ವಾಮಿಯನ್ನು ಪ್ರಾರ್ಥಿಸಲು ದೇವರು ನರಸಿಂಹಾವತಾರವನ್ನು ತಾಳಿ ಬಂದು ಹಿರಣ್ಯಕಶಿಪುವನ್ನು ಸಂಹರಿಸಿ, ತನ್ನ ಭಕ್ತನನ್ನು ಸಂರಕ್ಷಿಸಿದನು. (ಭಾಗವತ vii-ಅ. 1 ಮತ್ತು 2).

ಯಮಸುತನ ರಾಣಿಗೆ ಅಕ್ಷಯವಸನವನಿತ್ತೆ

(ಕೀ. 17-ನು. 3) (ಸು. 120) (ಕೀ. 140–ನು. 2) (ಕಿ. 142–ನು.2) : ದುರ್ಯೋಧನನ ಆಜ್ಞಾನುಸಾರವಾಗಿ ದುಶ್ಶಾಸನನು ತುಂಬಿದ ಸಭೆಯಲ್ಲಿ ದ್ರೌಪದಿಯ ಸೀರೆ ಯನ್ನು ಸೆಳೆಯತೊಡಗಲು ಆಕೆ ಅಸಹಾಯಕಳಾಗಿ ಶ್ರೀಕೃಷ್ಣನಲ್ಲಿ ಮೊರೆಯಿಟ್ಟಳು. ಅಬಲೆಯ ಆ ಆರ್ತನಾದವನ್ನು ಆಲಿಸಿದ ಶ್ರೀಕೃಷ್ಣ' ಆಕೆಗೆ ಅಕ್ಷಯವಸ್ತ್ರವನ್ನು ಅನುಗ್ರಹಿ ಸಿದನು(ಮಹಾಭಾರತ—ಸಭಾಪರ್ವ).

ಗಗನಕ್ಕೆ ಬೆಳೆದು ಗಂಗೆಯ ಪಡೆದ

(ಕೀ. 21-ಪಲ್ಲವಿ) (ಕೀ. 46-ನು. 1) (ಕೀ. 51-ನು. 3) (ಉ. 144) (ಕೀ. 148–ನು. 4): ಶ್ರೀ ವಿಷ್ಣು ಬಲಿಚಕ್ರವರ್ತಿಯ ದರ್ಪವನ್ನು ಅಡಗಿಸಲು ವಾಮನಾವತಾರ ವನ್ನು ತಾಳಿ ಬಂದನಷ್ಟೆ. ಅವನು ಮೂರು ಹೆಜ್ಜೆಗಳಷ್ಟು ಎಡೆಯನ್ನು ಬೇಡಲು, ಬಲಿಚಕ್ರವರ್ತಿ, ತನ್ನ ಗುರುವಿನ ಮಾತನ್ನೂ ಲೆಕ್ಕಿಸದೆ ಸಂತೋಷವಾಗಿ ಕೊಡಲು ಒಪ್ಪಿ ದನು. ಆಗ ವಾಮನಾವತಾರಿಯಾಗಿದ್ದ ಶ್ರೀ ವಿಷ್ಣು ತ್ರಿವಿಕ್ರಮನಾಗಿ ಬೆಳೆದು ಒಂದು ಹೆಜ್ಜೆಯಿಂದ ಸಮಸ್ತ ಭೂಲೋಕವನ್ನೂ ಇನ್ನೊಂದು ಹೆಜ್ಜೆಯಿಂದ ವಿಶಾಲವಾದ ವ್ಯೋಮವನ್ನೂ ಅಳೆದನು. ಮೂರನೆಯ ಹೆಜ್ಜೆ ಇಡಲು ಅವಕಾಶವಿಲ್ಲದಾಯಿತು. ಆಗ ಬಲಿಚಕ್ರವರ್ತಿ ಮೂರನೆಯ ಹೆಜ್ಜೆಯನ್ನು ತನ್ನ ತಲೆಯ ಮೇಲೆ ಇಡುವಂತೆ ಕೇಳಿ ಕೊಂಡನು. ಆಗ ಶ್ರೀ ವಿಷ್ಣು ಹಾಗೆಯೇ ಮಾಡಿ ಬಲಿಯನ್ನು ಸುತಲದಲ್ಲಿರುವಂತೆ ಆಜ್ಞಾ ಪಿಸಿದನು. ಶ್ರೀ ವಿಷ್ಣು ತನ್ನ ಎರಡನೆಯ ಹೆಜ್ಜೆಯನ್ನು ಆಕಾಶದೆತ್ತರ ಇಡಲು, ಆಗ ಅವನ ಪಾದ ವ್ಯೋಮವನ್ನು ಭೇದಿಸಿಕೊಂಡು ಸತ್ಯಲೋಕದವರೆಗೂ ಹೋಯಿತು. ಆಗ

ಅಲ್ಲಿದ್ದ ಬ್ರಹ್ಮನು ಶ್ರೀಹರಿಯ ಕಾಲನ್ನು ತೊಳೆಯುಲು ಆ ನೀರು ಗಂಗೆಯಾಗಿ ಅವತರಿಸಿತು. (ಭಾಗವತ v–ಅ. 3, viii–ಅ. 3).

## ಮಂದರಾದ್ರಿಧರ

(ಕೀ. 38–ಸು. 5) : ದೇವಾಸುರರು ಕ್ಷೀರಸಮುದ್ರವನ್ನು ಕಡೆಯುವ ಕಾಲದಲ್ಲಿ ಅವರು ಕಡೆಗೋಲನ್ನಾಗಿ ಬಳಸಿದ ಮಂದರ ಪರ್ವತವನ್ನು ತನ್ನ ಬೆನ್ನಿನ ಮೇಲೆ ಹೊರುವ ಸಲುವಾಗಿ ಶ್ರೀ ವಿಷ್ಣು ಕೂರ್ಮಾವತಾರವನ್ನು ತಾಳಬೇಕಾಯಿತು (ಭಾಗವತ viii–ಅ.2)

## ಅಕ್ರೂರ ವರದ

(ಕೀ. 38–ಸು. 5) (ಕೀ. 138–ಸು. 4) : ಶ್ರೀಕೃಷ್ಣನನ್ನು ಮಥುರೆಗೆ ಕರೆತರಲು ಕಂಸನು ಕಳುಹಿಸಿದ ದೂತನೇ ಅಕ್ರೂರ. ಈತನು ವಿಷ್ಣುಭಕ್ತ. ಅಕ್ರೂರನು ಕೃಷ್ಣ ಬಲರಾಮರನ್ನು ಮಥುರೆಗೆ ಕರೆತರುತ್ತಿರುವಾಗ ಮಾರ್ಗ ಮಧ್ಯದಲ್ಲಿ ಯಮುನಾ ನದಿಯಲ್ಲಿ ಸ್ನಾನಕ್ಕಾಗಿ ಇಳಿದರು. ಆಗ ಶ್ರೀಕೃಷ್ಣನು ಅಕ್ರೂರನಿಗೆ ತನ್ನ ವಿಶ್ವರೂಪವನ್ನು ತೋರಿಸಿ ಅನುಗ್ರಹಿಸಿದನು (ಭಾಗವತ x (ಪೂರ್ವಾರ್ಧ)–ಅ. 6).

## ಆ ಪತಿಶಾಪದಿ ಅಹಲ್ಯೆ....ಸತಿ ಪಡೆದಳು ದಿವ್ಯ ದೇಹವನು

(ಕೀ. 46–ಸು. 2) (ಕೀ. 51–ಸು. 3) (ಕೀ. 103–ಸು. 1) (ಕೀ. 133–ಸು. 3) (ಕೀ. 134 ಸಿ. ಸು. 1): ಗೌತಮ ಋಷಿಯ ಆಗ್ರಹದಿಂದ ಆತನ ಪತ್ನಿಯಾದ ಅಹಲ್ಯೆ ಕಲ್ಲಾದಳಷ್ಟೆ. ವಿಶ್ವಾಮಿತ್ರ ಋಷಿಗಳು ರಾಮಲಕ್ಷ್ಮಣರನ್ನು ಒಡಗೂಡಿ ಮಿಥಿಲೆಗೆ ಬರುತ್ತಿರುವಲ್ಲಿ, ಮಾರ್ಗಮಧ್ಯದಲ್ಲಿ ಗೌತಮ ಋಷಿಗಳ ತಪೋವನ ಸಿಕ್ಕಿತು. ಆಗ ಶ್ರೀರಾಮನ ಪಾದಸ್ಪರ್ಶದಿಂದ ಅಲ್ಲಿ ಬಿದ್ದಿದ್ದ ಬಂಡೆಯಿಂದ ಅಹಲ್ಯೆ ಮತ್ತೆ ಗೋಚರಿಸಿದಳು. ಆಕೆಯ ಗಂಡನಿತ್ತಿದ್ದ ಶಾಪ ಅಂದಿಗೆ ವಿಮೋಚನೆಯಾಯಿತು (ರಾಮಾಯಣ, ಬಾಲಕಾಂಡ).

## ಕರಪತ್ರದಿಂದ ತಾಮ್ರಧ್ವಜನ ತಂದೆಯ ಕೊರಳು ಕೊಯಿಸಿದೆ

(ಕೀ. 72–ಸು. 1): ಧರ್ಮರಾಯನು ಕೈಕೊಂಡ ಅಶ್ವಮೇಧಯಾಗದ ಸಂದರ್ಭದಲ್ಲಿ ಯಜ್ಞಾಶ್ವವು ರತ್ನಪುರಿಯ ಬಳಿಗೆ ಬಂದಾಗ, ಮಯೂರಧ್ವಜನ ಮಗನಾದ ತಾಮ್ರಧ್ವಜನು ಕಟ್ಟಿ ಹಾಕಿದನು. ಆ ಕುದುರೆಯ ನಿಮಿತ್ತದಿಂದ ಅರ್ಜುನ ಮತ್ತು ತಾಮ್ರಧ್ವಜರ ಸೈನ್ಯಗಳಿಗೆ ಬಲವಾದ ಕಾಳಗವಾಯಿತು. ಶ್ರೀಕೃಷ್ಣ ಮತ್ತು ಅರ್ಜುನರು ಒಟ್ಟಾಗಿ ನಿಂತರೂ ತಾಮ್ರಧ್ವಜನನ್ನು ಗೆಲ್ಲುವುದು ಅಸಾಧ್ಯವಾಯಿತು. ಕಡೆಗೆ, ಶ್ರೀಕೃಷ್ಣ

ಮತ್ತು ಅರ್ಜುನರು ನಿಶ್ಚೇಷ್ಟಿತರಾಗಿರಲು, ತಾಮ್ರಧ್ವಜನು ಯಜ್ಞಾಶ್ವದ ಸಮೇತ ತನ್ನ ತಂದೆಯಾದ ಮಯೂರಧ್ವಜನಲ್ಲಿಗೆ ಬಂದನು. ತಾಮ್ರಧ್ವಜನ ಸೈನ್ಯಾಧಿಕಾರಿಯಿಂದ ನಡೆದ ಸಂಗತಿಯೆಲ್ಲ ಮಯೂರಧ್ವಜನಿಗೆ ತಿಳಿಯಲು, ವಿಷ್ಣುಭಕ್ತನಾಗಿದ್ದ ಆತನು ಬಹಳ ವಾಗಿ ಮರುಗಿದನು. ತಾನು ಕೈಕೊಂಡಿದ್ದ ಯಜ್ಞಕ್ಕೆ ಶ್ರೀಕೃಷ್ಣನೇ ಬಂದ ಸಮಯದಲ್ಲಿ ತನ್ನ ಮಗನ ಅಚಾತುರ್ಯದಿಂದ ಹೀಗಾಯಿತಲ್ಲ ಎಂದು ಪರಿತಪಿಸಿದನು. ಈ ವೇಳೆಗೆ ಶ್ರೀಕೃಷ್ಣನು, ಅರ್ಜುನನನ್ನು ಕುರಿತು ತಾವು ಈಗ ಉಪಾಯದಿಂದ ಮಯೂರಧ್ವಜನ ಮನಸ್ಸನ್ನು ಒಲಿಸಿ ಯಜ್ಞಾಶ್ವವನ್ನು ಬಿಡಿಸಿಕೊಂಡು ಬರಬೇಕಾಗಿದೆಯೆಂದು ಹೇಳಿದನು. ಆ ಬಳಿಕ ಅರ್ಜುನನನ್ನು ತುಸು ದೂರದಲ್ಲಿರುವಂತೆ ಹೇಳಿ, ತಾನು ಯಾಗದೀಕ್ಷಿತನಾಗಿದ್ದ ಮಯೂರಧ್ವಜನ ಬಳಿಗೆ ವಿಪ್ರವೇಷದಲ್ಲಿ ಬಂದನು. ಭಾಗವತೋತ್ತಮನಾದ ಮಯೂರಧ್ವಜನು ಅಲ್ಲಿಗೆ ಬಂದ ಬ್ರಾಹ್ಮಣನನ್ನು ಕುಶಲ ಪ್ರಶ್ನೆಮಾಡಿ ಆತನ ಇಷ್ಟಾರ್ಥ ವೇನೆಂದು ಕೇಳಿದನು. ವಿಪ್ರವೇಷಧಾರಿಯಾದ ಶ್ರೀಕೃಷ್ಣ "ಎಲೈ ರಾಜಶ್ರೇಷ್ಠನೇ, ನಾನೂ ಮತ್ತು ನನ್ನ ಮಗನೂ ನಿಮ್ಮ ಊರಿಗೆ ಬರುತ್ತಿರುವಲ್ಲಿ ಒಂದು ಸಿಂಹವು ಅಡ್ಡಗಟ್ಟಿ, ನನ್ನ ಮಗನನ್ನು ಹಿಡಿಯಿತು. ಅದು, ಎಷ್ಟು ಬೇಡಿಕೊಂಡರೂ ನನ್ನ ಮಗನನ್ನು ಬಿಟ್ಟುಕೊಡಲು ಒಪ್ಪಲಿಲ್ಲ. ಕಡೆಗೆ, ಮಯೂರಧ್ವಜನ ಶರೀರದ ಬಲಭಾಗವನ್ನು ತನಗೆ ತಂದುಕೊಟ್ಟರೆ ನನ್ನ ಮಗನನ್ನು ಬಿಡುವುದಾಗಿ ಹೇಳಿತು. ಆದ್ದರಿಂದ ನಾನು ನಿನ್ನಲ್ಲಿ ಈ ಯಾಚನಾರ್ಥ ವಾಗಿ ಬಂದಿದ್ದೇನೆ" ಎಂದನು. ಮಯೂರಧ್ವಜನು ಈ ಮಾತುಗಳನ್ನು ಕೇಳಿ ಅಳುಕಲಿಲ್ಲ. ತನ್ನ ಮಗನಾದ ತಾಮ್ರಧ್ವಜನನ್ನೂ, ಹೆಂಡತಿಯಾದ ಕುಮುದ್ವತಿಯನ್ನೂ ಕರೆದು ಗರಗಸದಿಂದ ತನ್ನ ದೇಹವನ್ನು ಎರಡು ಸೀಳುಮಾಡಿ, ಬಲಭಾಗವನ್ನು ಬ್ರಾಹ್ಮಣನಿಗೆ ಸಮರ್ಪಿಸಬೇಕೆಂದು ಆಜ್ಞೆಮಾಡಿದನು. ರಾಜನ ಆಣತಿಯನ್ನು ಮೀರಲಾರದೆ ಅವರು ಹಾಗೆಯೇ ಮಾಡತೊಡಗಿದರು. ಈ ಮಧ್ಯೆ ಮಯೂರಧ್ವಜನ ಎಡಗಣ್ಣಿನಲ್ಲಿ ನೀರು ತೊಟ್ಟಿಕ್ಕಿತು. ಅದನ್ನು ಕಂಡ ವಿಪ್ರನು, ಕಣ್ಣೀರು ಸುರಿಸುತ್ತ ಕೊಡುವ ದಾನವು ತನಗೆ ಸಲ್ಲದೆಂದು ಆಕ್ಷೇಪಿಸಿದನು. ಆಗ ಮಯೂರಧ್ವಜನು "ಅಯ್ಯಾ ವಿಪ್ರೋತ್ತಮ ! ನನ್ನ ದೇಹದ ಬಲಭಾಗ ದಾನದಿಂದ ಸಾರ್ಥಕವಾಯಿತು. ಆದರೆ ಎಡಭಾಗ ವ್ಯರ್ಥವಾಗುತ್ತದೆ ಯೆಂದು ದುಃಖಿಸಿದನೇ ಹೊರತು ಬೇರೇನೂ ಅಲ್ಲ" ಎಂದು ಸಮಾಧಾನ ಹೇಳಿದನು. ಆಗ ಶ್ರೀಕೃಷ್ಣನಿಗೆ ಮಯೂರಧ್ವಜನ ಭಕ್ತಿಯನ್ನು ಕಂಡು ತುಂಬ ಆನಂದವಾಯಿತು. ಕೂಡಲೇ ತನ್ನ ನಿಜರೂಪವನ್ನು ತೋರಿ, ಮಯೂರಧ್ವಜನನ್ನು ಎಂದಿನಂತೆಯೇ ಉಳಿಯುವಂತೆ ಮಾಡಿದನು. ಆ ವೇಳೆಗೆ ಅರ್ಜುನನೂ ಅಲ್ಲಿಗೆ ಬಂದನು. ಯಾಗದೀಕ್ಷಿತನಾಗಿದ್ದ ಮಯೂರ ಧ್ವಜನಿಗೆ ಶ್ರೀಕೃಷ್ಣನ ಆಗಮನದಿಂದ ತನ್ನ ಯಾಗ ಸಾರ್ಥಕವಾಯಿತೆಂದು ಅತ್ಯಂತ ಸಂತೋಷವಾಯಿತು. ಆ ಬಳಿಕ ತನ್ನ ಮಗನು ಕಟ್ಟಿ ತಂದಿದ್ದ ಯಜ್ಞಾಶ್ವವನ್ನು ಹಿಂತಿ ರುಗಿಸಿ, ಅವರನ್ನು ಪರಮಾದರದಿಂದ ಬೀಳ್ಕೊಂಡನು. (ಜೈಮಿನಿ ಭಾರತ ಅ. 43-45).

## ಮರುಳನಂದದಿ ಪೋಗಿ ಭೃಗುಮುನಿಯ ಕಣ್ಗೊಂಡೆದೆ

(ಕೀ. 72-ನು. 1) (ಕೀ. 136–ನು. 2): ಹರಿಹರ ಬ್ರಹ್ಮರಲ್ಲಿ ಯಾರು ಶ್ರೇಷ್ಠರೆಂದು ಮುನಿಗಳಲ್ಲಿ ವಿವಾದವಾಗಲು, ಆಗ ಅವರು ಭೃಗುಮುನಿಯನ್ನು ಕರೆಸಿ ಇದನ್ನು ನಿರ್ಧರಿಸುವಂತೆ ಕೇಳಿಕೊಂಡರು. ಭೃಗುಮುನಿ ಬ್ರಹ್ಮನ ಬಳಿಗೂ, ಹರನ ಬಳಿಗೂ ಹೋದಾಗ ಅವರು ಮುನಿಯನ್ನು ಸೂಕ್ತವಾಗಿ ಸತ್ಕರಿಸಲಿಲ್ಲ; ತಮ್ಮ ತಮ್ಮ ಕಾರ್ಯದಲ್ಲಿ ತತ್ಪರರಾಗಿದ್ದರು. ವಿಷ್ಣುವು ಇದ್ದ ವೈಕುಂಠಕ್ಕೆ ಬರಲು ಶ್ರೀ ವಿಷ್ಣು ಲಕ್ಷ್ಮಿಯ ತೊಡೆಯ ಮೇಲೆ ವಿಶ್ರಮಿಸುತ್ತಿದ್ದುದನ್ನು ಕಂಡನು. ಭೃಗುಮುನಿ, ಶ್ರೀವಿಷ್ಣುವಿನ ಎದೆಯನ್ನು ತನ್ನ ಕಾಲಿನಿಂದ ಒದೆಯಲು, ಪರಮಾತ್ಮನು ಕೋಪಗೊಳ್ಳದೆ, ಭೃಗುಮುನಿಯ ಕಾಲಿಗೆ ನೋವಾಯಿತೆ ಎಂದು ಉಪಚರಿಸಿದನು. ಭೃಗುಮುನಿಗೆ ಶ್ರೀವಿಷ್ಣುವಿನ ಈ ವರ್ತನೆಯನ್ನೂ ತಾಳ್ಮೆಯನ್ನೂ ಕಂಡು ಪರಮಾಶ್ಚರ್ಯವಾಯಿತು. ಮುನಿಗಳಿದ್ದಲ್ಲಿಗೆ ಬಂದು ಶ್ರೀ ವಿಷ್ಣು ಒಬ್ಬನೇ ಸರ್ವೋತ್ತಮನೆಂದು ತಿಳಿಸಿದನು. ಭೃಗು ತನ್ನ ಕಾಲಿನಿಂದ ಪರಮಾತ್ಮನ ಎದೆಯನ್ನು ಒದ್ದಾಗ, ಆತನ ಕಾಲಿನಲ್ಲಿದ್ದ ಕಣ್ಣನ್ನು ಉಪಾಯದಿಂದ ಚಿವುಟಿದನು ಎಂದು ತಿಳಿದುಬರುತ್ತದೆ. ಹರಿದಾಸರು ಈ ಪ್ರಸಂಗವನ್ನು ಬಹಳ ಸ್ವಾರಸ್ಯವಾಗಿ ನಿರೂಪಿಸಿರುತ್ತಾರೆ. (ಭವಿಷ್ಯೋತ್ತರ ಪುರಾಣ)

## ಅರಿತು ತ್ರಿಪುರಾಸುರನ ಹೆಂಡಿರ ಬೆರೆದೆ

(ಕೀ. 72–ನು. 2) : ತಾರಕಾಸುರನ ಮಕ್ಕಳಾದ ತಾರಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿ ಎಂಬವರು, ಬೆಳ್ಳಿ, ಬಂಗಾರ ಮತ್ತು ಕಬ್ಬಿಣಗಳಿಂದ ಅಂತರಿಕ್ಷದಲ್ಲಿ ನಿರ್ಮಿಸಿದ ತಮ್ಮ ತಮ್ಮ ಅರಮನೆಗಳಲ್ಲಿ ವಾಸಮಾಡುತ್ತ, ಪ್ರಬಲರಾಗಿ ದೇವತೆಗಳಿಗೆ ಉಪದ್ರವವನ್ನು ಕೊಡುತ್ತಿದ್ದರು. ಇವರನ್ನು ಸಂಹರಿಸಲು ಈಶ್ವರನು ಅಪೂರ್ವವಾದ ರೀತಿಯಲ್ಲಿ ತನ್ನ ರಥ, ಮತ್ತು ಆಯುಧಗಳನ್ನು ನಿರ್ಮಿಸಿಕೊಂಡು ತ್ರಿಪುರಾಸುರರ ಪುರಗಳನ್ನು ದಹಿಸಿದನು. ಶ್ರೀ ವಿಷ್ಣುವಾದರೋ ಆ ಪುರಗಳಲ್ಲಿದ್ದ ಮಡುವಿನ ನೀರನ್ನೆಲ್ಲ ಬತ್ತಿಸಿದುದಲ್ಲದೆ, ಆ ತ್ರಿಪುರಾಸುರರ ಹೆಂಡತಿಯರು ಜಲಕ್ರೀಡೆಯಾಡುತ್ತಿರುವಲ್ಲಿ ಅವರ ಮುಂದೆ ಸುಳಿದು ಅವರ ಪಾತಿವ್ರತ್ಯವನ್ನು ಭಂಗಮಾಡಿದನು. ಅದರಿಂದ ಆ ದೈತ್ಯರು ಸಾವನ್ನು ಅಪ್ಪಬೇಕಾಯಿತು. (ಭಾಗವತ vii–ಅ. 4)

## ತಾಯಿ ಗೋಪಿಯಂತೆ ಒರಳನೆಳಸಲಿಲ್ಲ

(ಉಗಾಭೋಗ 74) : ಶ್ರೀಕೃಷ್ಣನು ಬಾಲ್ಯದಲ್ಲಿ ತಾಯಿಯ ಮಾತನ್ನು ಕೇಳದಿರಲು ಆಕೆ ಆತನನ್ನು ಒಂದು ಒರಳಿಗೆ ಕಟ್ಟಿದಳು. ತುಂಟ ಗೋಪಾಲ ಅಲ್ಲಿಗೂ ಸುಮ್ಮನಾಗಲಿಲ್ಲ. ಯಶೋದೆ ಮರೆಯಾಗಲು ಆ ಒರಳನ್ನು ಎಳೆದುಕೊಂಡು ಹಿತ್ತಿಲಲ್ಲಿದ್ದ

ಯಮಳಾರ್ಜುನ ವೃಕ್ಷಗಳ ಮಧ್ಯೆ ನುಸುಳಿದನು. ಆಗ ಆ ಮರಗಳು ಬುಡಸಹಿತ ನೆಲಕ್ಕೆ ಉರುಳಿದುವು. ಕೂಡಲೇ ಆ ಮರಗಳ ಒಡಲಿಂದ ಕುಬೇರನ ಮಕ್ಕಳಾದ ನಳಕೂಬರ ಮಣಿಗ್ರೀವರೆಂಬುವರು ಉದ್ಭವಿಸಿ ದೇವರಿಗೆ ನಮಸ್ಕರಿಸಿದರು. ಅಂದಿಗೆ ಅವರಿಗೆ ನಾರದರಿತ್ತ ಶಾಪ ವಿಮೋಚನೆಯಾಯಿತು. (ಭಾಗವತ x–ಅ. 3)

ನೀರೊಳಗೆ ನಿಂತು ನಿಡುಗುಪ್ಪು ನಾರುವಗೆ

(ಉಗಾಭೋಗ 78) : ಇದು ಮತ್ಸ್ಯಾವತಾರದ ನಿಂದಾಸ್ತುತಿ.

ಭಾರ ಬೆನ್ನಿಲಿ ಪೊತ್ತು ಕೈಕಾಲು ಮುದುರಿದಗೆ

(ಉಗಾಭೋಗ 78) : ಇದು ಕೂರ್ಮಾವತಾರದ ನಿಂದಾಸ್ತುತಿ.

ಮೋರೆಯಲಿ ನೆಲಕೆದರಿ ಬೇರ ಮೆಲುವವಗೆ

(ಉಗಾಭೋಗ 78) : ಇದು ವರಾಹಾವತಾರದ ನಿಂದಾಸ್ತುತಿ.

ಕಾರ ಕರುಳನು ವನಮಾಲೆ ಹಾಕಿದವಗೆ

(ಉಗಾಭೋಗ 78) : ಇದು ನರಸಿಂಹಾವತಾರದ ನಿಂದಾಸ್ತುತಿ.

ಧಾರುಣಿಯನಿತ್ತು ಕುಳ್ಳಿರೆ ಸ್ಥಳವಿಲ್ಲದವಗೆ

(ಉಗಾಭೋಗ 78) : ಇದು ಪರಶುರಾಮಾವತಾರದ ನಿಂದಾಸ್ತುತಿ.

ನಾರಿಯನು ಕಳಕೊಂಡು ವನವ ಸಂಚರಿಸಿದವಗೆ

(ಉಗಾಭೋಗ 78): ಇದು ಶ್ರೀರಾಮಾವತಾರದ ನಿಂದಾಸ್ತುತಿ.

ಪೋರನಾರಿಯರಿಂದ ಬೈಸಿಕೊಂಡವನಿಗೆ

(ಉಗಾಭೋಗ 78) : ಇದು ಶ್ರೀಕೃಷ್ಣಾವತಾರದ ನಿಂದಾಸ್ತುತಿ.

ಊರೆಲ್ಲ ನೋಡೆ ಬತ್ತಲೆ ನಿಂತವಗೆ

(ಉಗಾಭೋಗ 78) : ಇದು ಬೌದ್ಧಾವತಾರದ ನಿಂದಾಸ್ತುತಿ.

ಘೋರ ತುರಗವನೇರಿ ಹಾರಿಸ್ಯಾಡುವಗೆ

(ಉಗಾಭೋಗ 78) : ಇದು ಕಲ್ಕ್ಯವತಾರದ ನಿಂದಾಸ್ತುತಿ.

ತರಣಿ ತನಯುನ ಸುತನ ಬಾಯೊಳಗನೃತವ ಭರದಿಂದ ನುಡಿಸಿದನ

(ಕೀ. 91–ಸು. 1) ಯಮಧರ್ಮರಾಯನ ಮಗನೂ, ಸತ್ಯಸಂಧನೂ ಆದ ಧರ್ಮರಾಜನ ಬಾಯಲ್ಲಿ ಶ್ರೀಕೃಷ್ಣನು "ಅಶ್ವತ್ಥಾಮೋ ಹತಃ ಕುಂಜರಃ" ಎಂದು ಆಡಿಸಿ, "ಕುಂಜರಃ" ಎಂಬ ಶಬ್ದ ಕೇಳದಂತೆ ತನ್ನ ಶಂಖವನ್ನು ಊದಿದನು. ಈ ಹೇಳಿಕೆಯನ್ನು ಕೇಳಿದ ದ್ರೋಣಾಚಾರ್ಯರು, ತಮ್ಮ ಪುತ್ರನು ಯುದ್ಧದಲ್ಲಿ ಸತ್ತನೆಂದು ದುಃಖಿತಪ್ಪರಾಗಿ ಕೂಡಲೇ ಶಸ್ತ್ರಸಂನ್ಯಾಸವನ್ನು ಕೈಕೊಂಡರು. (ಭಾರತ–ದ್ರೋಣಪರ್ವ)

ತರಣಿಸುತನ ಬಾಣವೆರಗದಂದದಿ ರಥವ ಧರೆಗೆ ಒತ್ತಿದ ದೇವನ

(ಅದೇ-ಸು.1) ಕರ್ಣನು ಬಿಟ್ಟ ಸರ್ಪಾಸ್ತ್ರ ಅರ್ಜುನನ ಸಮೀಪಕ್ಕೆ ಬರುತ್ತಿರಲು,ಆಗ ಶ್ರೀಕೃಷ್ಣನು ರಥವನ್ನು ಒತ್ತಿದನು. ಆ ಸರ್ಪಾಸ್ತ್ರ ಅರ್ಜುನನ ಕಿರೀಟವನ್ನು ಹಾರಿಸಿತೇ ವಿನಾ ಕತ್ತನ್ನು ತಾಗಲಿಲ್ಲ (ಭಾರತ–ಕರ್ಣಪರ್ವ)

ತರಣಿಯ ಮರೆಮಾಡಿ ಶಿರವ ತರಿಯುವಂತೆ ನರಗೆ ಸೂಚಿಸಿದಾತನ

(ಅದೇ-ಸು. 1) ಸೈಂಧವನನ್ನು ಸಂಜೆ ಮುಗಿಯುವುದರೊಳಗಾಗಿ ಕೊಲ್ಲುವುದಾಗಿ ಶಪಥತೊಟ್ಟ ಅರ್ಜುನನಿಗೆ, ತನ್ನ ಎದುರಾಳಿ ಕಣ್ಣಿಗೇ ಬೀಳದಿರಲು ಬಹುವಾಗಿ ತಳಮಳಗೊಂಡನು. ಆಗ ಶ್ರೀಕೃಷ್ಣನು ತನ್ನ ಚಕ್ರದಿಂದ ಸೂರ್ಯನನ್ನು ಮರೆಮಾಡಿ ಕತ್ತಲೆ ಕವಿಯುವಂತೆ ಮಾಡಿದನು. ಸೂರ್ಯನು ಮುಳುಗಿದನೆಂದು ಭಾವಿಸಿದ ಸೈಂಧವನು ತಾನು ತಲೆಮರೆಸಿಕೊಂಡಿದ್ದ ಎಡೆಯಿಂದ ರಣರಂಗಕ್ಕೆ ಬಂದನು. ಅದೇ ಸುಸಮಯವೆಂದು ಶ್ರೀಕೃಷ್ಣನು ಅರ್ಜುನನನ್ನು ಪ್ರಚೋದಿಸಿ ಸೈಂಧವನ ತಲೆಯನ್ನು ಕೆಡಹಿಸಿ, ತಾನು ಮರೆಮಾಡಿದ್ದ ಚಕ್ರವನ್ನು ಹಿಂತೆಗೆದುಕೊಂಡು,ಸೂರ್ಯನು ಇನ್ನೂ ಮುಳುಗದೆ ಇದ್ದುದನ್ನು ಜಗಕ್ಕೆ ತೋರಿಸಿದನು. (ದ್ರೋಣಪರ್ವ)

ತರಣಿಯೊಡನೆ ಪಂಥವಾಡಿ ತಿರುಗಿದನತನಯುನಳಿದನ

(ಅದೇ-ಸು. 1) : ?

ಗೋತ್ರಭೇದಿಸುತನ ಹೆಂಡಿರಮಗನ ಮಾತುಳನಾದವನ

(ಅದೇ–ಸು. 2) : ಪರ್ವತಭೇದಿಯಾದ ಇಂದ್ರನ ಅಂಶದಿಂದ ಹುಟ್ಟಿದ ಅರ್ಜುನನು ಶ್ರೀಕೃಷ್ಣನ ಸಹೋದರಿಯಾದ ಸುಭದ್ರೆಯನ್ನು ಮದುವೆಯಾಗಿದ್ದನಷ್ಟೆ. ಆಕೆಯ ಮಗನಾದ ಅಭಿಮನ್ಯುವಿಗೆ ಶ್ರೀಕೃಷ್ಣನು ವಾವೆಯಲ್ಲಿ ಸೋದರಮಾವನಾಗಬೇಕು.

ಕತ್ತಲೆಯಲಿ ಪೋಗಿ ಕುತ್ತಿಟ್ಟವನ ಮೈಯ ಸುತ್ತಿ ಬಾಧಿಸುತಿಪ್ಪನ

(ಅದೇ–ನು. 2) ?

ತತ್ವವನರಿತು ಸುತತ್ವವ ಬೋಧಿಸಿ ಉತ್ತರವಿತ್ತವನ

(ಅದೇ–ನು. 2) : ಅರ್ಜುನನು ಯುದ್ಧಮಾಡಲು ಹಿಂತೆಗೆಯುತ್ತಿದ್ದ ಮರ್ಮವನ್ನು ಮನಗಂಡು ಭಗವದ್ಗೀತೆಯನ್ನು ಬೋಧಿಸಿದ ಶ್ರೀಕೃಷ್ಣ (ಭಾರತ–ಭೀಷ್ಮಪರ್ವ)

ಮುತ್ತಯ್ಯನ ತಾಯ ಪೆತ್ತದೇವನ

(ಅದೇ–ನು. 2) : ಪಾಂಡವ, ಕೌರವರಿಬ್ಬರಿಗೂ ಭೀಷ್ಮಾಚಾರ್ಯರು ಅಜ್ಜನಾಗಬೇಕಷ್ಟೆ. ಭೀಷ್ಮನ ತಾಯಿ ಗಂಗೆ. ಆ ಗಂಗೆ ವಿಷ್ಣುವಿನ ಪಾದದಿಂದ ಉದ್ಭವಿಸಿದಳಾದುದರಿಂದ, ಒಂದು ರೀತಿಯಲ್ಲಿ ವಿಷ್ಣುವಿನ ಅವತಾರವಾದ ಶ್ರೀಕೃಷ್ಣನಿಗೆ ಗಂಗೆ ಪುತ್ರಿಯಾಗುತ್ತಾಳೆ.

ಜಾಹ್ನವಿಯ ತೀರವಂತೆ, ಜನಕರಾಯನ ಕುವರಿಯಂತೆ, ಜಾನಕಿಯ ವಿವಾಹವಂತೆ

(ಕೀ. 100–ನು. 1) : ಇದು ಸೀತಾಕಲ್ಯಾಣದ ಪ್ರಸಂಗವನ್ನು ಕುರಿತಿದ್ದು (ರಾಮಾಯಣ-ಬಾಲಕಾಂಡ)

ಕುಂಡಿನೀಯ ನಗರವಂತೆ ಭೀಷ್ಮಕನ ಕುವರಿಯಂತೆ

(ಕೀ.100–ನು. 2) ; (ಕೀ. 122–ನು. 2): ಇದು ಶ್ರೀಕೃಷ್ಣನು ರುಕ್ಮಿಣಿಯನ್ನು ಅಪಹರಿಸಿ ಅನಂತರ ಕಲ್ಯಾಣವಾದ ಸಂದರ್ಭವನ್ನು ಕುರಿತಿದ್ದು (ಭಾಗವತ-ಉತ್ತರಾರ್ಧ ಅ. 2).

ಪಾಂಡವರು ಕೌರವರಿಗೆ ಲೆತ್ತವಾಡಿ ಸೋತವರಂತೆ

(ಅದೇ–ನು. 3) : ಧರ್ಮರಾಯನು ದುರ್ಯೋಧನನೊಂದಿಗೆ ಪಗಡೆಯಾಟವಾಡಿ ಸೋತ ಪ್ರಸಂಗವನ್ನು ನಿರ್ದೇಶಿಸುತ್ತದೆ. (ಭಾರತ–ಸಭಾಪರ್ವ)

ಗಕ್ಕಸದಿಂದ ಶಕಟಾಸುರನ ಸೊಕ್ಕ ಮುರಿದು ಬಂಡಿಯನೊದೆದು

(ಕೀ. 103–ನು. 2) ಯಶೋದೆ ಮತ್ತು ನಂದಗೋಪರು ತಮ್ಮ ಆಪ್ತೇಷ್ಟರೊಂದಿಗೆ ವನಭೋಜನಕ್ಕೆ ಹೋದಾಗ ಶ್ರೀಕೃಷ್ಣನನ್ನು ತಾವು ತಂದಿದ್ದ ಬಂಡಿಯ ಕೆಳಗೆ

ಅಣಿಮಾಡಿ ಮಲಗಿಸಿದ್ದರು. ಕಂಸನು ಕೊಟ್ಟು ಕಳುಹಿಸಿದ್ದ ಶಕಟಾಸುರನೆಂಬುವನು, ಇದೇ ಸೂಕ್ತ ಸಮಯವೆಂದು ತಿಳಿದು ಆ ಬಂಡಿಯ ಚಕ್ರವೊಂದರಲ್ಲಿ ಪ್ರವೇಶಿಸಿ, ಮಲಗಿದ್ದ ಶಿಶುವನ್ನು ಸಂಹರಿಸಲು ಪ್ರಯತ್ನಿಸಿದನು. ಶ್ರೀಕೃಷ್ಣನಾದರೋ ಈ ಗುಟ್ಟನ್ನು ತಿಳಿದು, ತನ್ನ ಪುಟ್ಟ ಕಾಲುಗಳಿಂದ ಆ ಚಕ್ರವನ್ನು ಒದೆಯಲು, ಆ ಬಂಡಿ ದೂರ ಚಲಿಸಿ, ಕೂಡಲೇ ಪುಡಿಪುಡಿಯಾಯಿತು. (ಭಾಗವತ-x (ಪೂರ್ವಾರ್ಧ) ಅ. 7)

## ಕಾಳಿಂಗನ ಹೆಡೆಯ ತುಳಿದು

(ಕೀ. 103–ನು. 3) (ಕೀ. 107-ನು. 2) : ಯಮುನಾ ನದಿಯ ಮಡುವಿನೊಂದೆಡೆಯಲ್ಲಿ ತನ್ನ ಸಂಸಾರ ಸಮೇತನಾಗಿ ನೆಲೆಸಿದ್ದ ಕಾಳಿಂಗನೆಂಬ ಸರ್ಪದಿಂದ ಸುತ್ತ ಮುತ್ತಲಿದ್ದ ದನಕರುಗಳಿಗೂ, ಗೋಪಾಲಕರಿಗೂ ತುಂಬ ತೊಂದರೆಯಾಗಿತ್ತು. ಈ ವಿಷಯವನ್ನು ಮನಗಂಡ ಶ್ರೀ ಕೃಷ್ಣ ಆ ಕಾಳಿಂಗ ಸರ್ಪದ ಹೆಡೆಯ ಮೇಲೆ ಕುಣಿದು ಅದರ ಸೊಕ್ಕನ್ನು ಅಡಗಿಸಿದನು. ಅನಂತರ ಆ ನಾಗಕನ್ನೆಯರ ಕೋರಿಕೆಯಂತೆ ಅದನ್ನು ದೂರದ ಸಮುದ್ರದೆಡೆಗೆ ಹೋಗುವಂತೆ ಆಜ್ಞಾಪಿಸಿದನು. (ಭಾಗವತ-x (ಪೂರ್ವಾರ್ಧ) - ಅ. 4.)

## ಪುಟ್ಟಿದೇಳು ದಿವಸದಲಿ ದುಷ್ಟ ಪೂತನಿಯನು ಕೊಂದೆ

(ಕೀ.107-ನು.1): ಶ್ರೀಕೃಷ್ಣನನ್ನು ಶಿಶುವಾಗಿದ್ದಾಗಲೇ ಸಂಹರಿಸಲೆಂದು ಕಂಸನು ಪೂತನಿಯೆಂಬ ರಾಕ್ಷಸಿಯನ್ನು ಗೋಕುಲಕ್ಕೆ ಕಳುಹಿಸಿದನು. ಮಾಯಾವಿಯಾದ ಆಕೆ ತನ್ನ ಘೋರ ರೂಪವನ್ನು ಮರೆಸಿಕೊಂಡು, ಸುಂದರ ಸ್ತ್ರೀ ರೂಪದಲ್ಲಿ ನಂದಗೋಪನ ಮನೆಗೆ ಬಂದಳು. ಸಮಯ ಕಾದು, ತೊಟ್ಟಿಲಲ್ಲಿ ಮಲಗಿದ್ದ ಶ್ರೀಕೃಷ್ಣನನ್ನು ಎತ್ತಿಕೊಂಡು, ಅವನಿಗೆ ಹಾಲನ್ನು ಕುಡಿಸುವ ನೆಪದಲ್ಲಿ ವಿಷಪೂರಿತವಾದ ತನ್ನ ಮೊಲೆಯನ್ನು ಮಗುವಿನ ಬಾಯಿಗಿಟ್ಟಳು. ಆಕೆಯ ದುಷ್ಟಬುದ್ಧಿಯನ್ನು ಗ್ರಹಿಸಿದ ಶ್ರೀಕೃಷ್ಣ ಹಾಲನ್ನು ಕುಡಿಯುವಂತೆಯೇ ನಟಿಸುತ್ತ ಆಕೆಯ ಪ್ರಾಣವನ್ನೇ ಹೀರಲು ಆರಂಭಿಸಿದನು. ಪೂತನಿಗೆ ದಿಕ್ಕು ತೋಚದಂತಾಗಿ ತತ್ತರಿಸಿದಳು. ಕಡೆಗೆ ದೊಪ್ಪನೆ ನೆಲದ ಮೇಲೆ ಬಿದ್ದು ಪ್ರಾಣವನ್ನು ಬಿಟ್ಟಳು. ಈ ಶಬ್ದವನ್ನು ಕೇಳಿದ ಯಶೋದೆ ಮತ್ತು ಇತರ ಗೋಪಿಯರು ಬಂದು ನೋಡಿ, ಅಲ್ಲಿನ ದೃಶ್ಯವನ್ನು ಕಂಡು ಭಯಚಕಿತರಾದರು. ಶಿಶುವಾದ ಶ್ರೀ ಕೃಷ್ಣನಾದರೋ ಆ ರಾಕ್ಷಸಿಯ ಶರೀರದ ಮೇಲೆ ನಿರ್ಭಯದಿಂದ ಹರಿದಾಡುತ್ತಿದ್ದನು. ಆಗ ಯಶೋದೆ ಮಗುವನ್ನು ಎತ್ತಿಕೊಂಡು, ಅದಕ್ಕೆ ದೃಷ್ಟಿಯನ್ನು ನಿವಾಳಿಸಿದಳು. ದುಷ್ಟ ಪೂತನಿಯ ಶರೀರವನ್ನು ತುಂಡುತುಂಡಾಗಿ ಕತ್ತರಿಸಿ ಸಂಸ್ಕಾರ ಮಾಡಲಾಯಿತು. (ಭಾಗವತ-x (ಪೂರ್ವಾರ್ಧ) ಅ. 2)

ಭರದಿಂದಿದ್ರು ಮಳೆಗರೆಯೆ ಬೆರಳಲಿ ಬೆಟ್ಟವನೆತ್ತಿದ ಕಾರಣ ಬೆರಳು ಉಳುಕಿತೆ

(ಕೀ. 107–ಸು. 3) (ಕೀ. 134ಸಿ-ಸು. 1) : ಗೋಪಗೋಪಿಯರೆಲ್ಲರೂ ಕೂಡಿ, ತಮ್ಮ ಡನ ಕರುಗಳಿಗೆ ಯಥೇಷ್ಟವಾಗಿ ಮೇವು, ನೀರು ದೊರೆಯುವಂತೆ ಅನುಗ್ರಹಿಸುತ್ತಿದ್ದ ದೇವೇಂದ್ರನ ಪೂಜೆ ಮಾಡತೊಡಗುವುದನ್ನು ಕಂಡ ಶ್ರೀಕೃಷ್ಣನು ಅವರ ಸಕಲ ಶ್ರೇಯಸ್ಸಿಗೂ ಕಾರಣವಾದ ಗೋವರ್ಧನ ಗಿರಿಯನ್ನು ಪೂಜಿಸಬೇಕೆಂದು ಸಕಾರಣವಾಗಿ ಬೋಧಿಸಿದನು. ಶ್ರೀಕೃಷ್ಣನ ಈ ವರ್ತನೆಯಿಂದ ಇಂದ್ರನಿಗೆ ತುಂಬ ಅಸಮಾಧಾನವಾಯಿತು. ಪ್ರಳಯ ಕಾಲದ ಮೋಡಗಳ ಪಡೆಯನ್ನು ಕುರಿತು, ಗೋಕುಲದಲ್ಲಿ ಏಕಪ್ರಕಾರವಾಗಿ ಬಿರುಸಾಗಿ ಮಳೆ ಕರೆಯುವಂತೆ ಆಜ್ಞಾಪಿಸಿದನು. ದೇವೇಂದ್ರನ ಅಣತಿಯಂತೆ ಆ ಮೋಡಗಳು ಏಳು ದಿನಗಳ ಕಾಲ ಎಡೆಬಿಡದೆ ಮಳೆಗರೆದುವು. ಇದು ಇಂದ್ರನ ಕಾರ್ಯವೆಂದು ತಿಳಿದ ಶ್ರೀಕೃಷ್ಣನು, ಗೋಕುಲದಲ್ಲಿದ್ದವರಿಗೆ ಅಭಯವಿತ್ತು, ಗೋವರ್ಧನ ಗಿರಿಯನ್ನು ತನ್ನ ಬೆರಳಿನ ತುದಿಯಲ್ಲಿ ಕೊಡೆ ಹಿಡಿಯುವಂತ ನಿಲ್ಲಿಸಿ, ಆ ಮಳೆಯಿಂದ ಯಾರಿಗೂ ಅಪಾಯವಾಗದಂತೆ ಸಂರಕ್ಷಿಸಿದನು. ಇಂದ್ರನಿಗೆ ತಾನು ಮಾಡಿದ ಅಪರಾಧದ ಅರಿವಾಗಿ ಪಶ್ಚಾತ್ತಾಪಪಟ್ಟನು. (ಭಾಗವತ x (ಪೂರ್ವಾರ್ಧ) – ಅ. 5)

ಅಸುರರೆಲ್ಲರ ಮಡುಹಿ ಹೆಸರಿನ ಮಲ್ಲರ ಮಡುಹಿದ ಕಾರಣ ಕಿಸುರು ತಾಕಿತೆ ನಿನಗೆ ರಂಗಯ್ಯ

(ಕೀ. 107-ಸು. 4) : ಕೃಷ್ಣ ಬಲರಾಮರು, ಕಂಸನ ನೆಲೆಯಾದ ಮಥುರಾ ನಗರವನ್ನು ಪ್ರವೇಶಿಸಿ, ರಾಜನ ಅರಮನೆಯ ಬಳಿಗೆ ಬಂದಾಗ ಅಲ್ಲಿದ್ದ ಚಾಣೂರ ಮತ್ತು ಮುಷ್ಟಿಕರೆಂಬ ಮಲ್ಲರು ಅವರನ್ನು ಮಲ್ಲಯುದ್ಧಕ್ಕಾಗಿ ಆಹ್ವಾನಿಸಿದರು. ಶ್ರೀ ಕೃಷ್ಣನು ಚಾಣೂರನೊಡನೆಯೂ ಬಲರಾಮನು ಮುಷ್ಟಿಕನೊಡನೆಯೂ ಹೋರಾಡಬೇಕಾಯಿತು. ಕಡೆಗೆ ಆ ಮಲ್ಲರಿಬ್ಬರೂ ಹತರಾಗಿ ನೆಲಕ್ಕೆ ಉರುಳಿದರು. (ಭಾಗವತ x (ಪೂರ್ವಾರ್ಧ) ಅ. 6)

ತಾಯಿಯೆಂಬೆನೆ ನಿನ್ನ – ಧ್ರುವನ್ನ ತಾಯಿಯು ನಿನ್ನಂತೆ ಕಾಯಿದಳೆ

(ಸು. 120) (ಕೀ. 140–ಸು. 6) (ಕೀ. 142–ಸು. 1) : ರಾಜನಾದ ಉತ್ತಾನಪಾದನು ಒಮ್ಮೆ ತನ್ನ ಸಿಂಹಾಸನವನ್ನು ಹತ್ತಿ ಕುಳಿತು, ತನ್ನ ಮೋಹದ ಮಡದಿ ಸುರುಚಿಯ ಮಗನಾದ ಉತ್ತಮನನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡು ಸಂತೋಷಯುಕ್ತನಾಗಿದ್ದನು. ಆಗ ರಾಜನ ಮತ್ತೊಬ್ಬ ಮಡದಿಯಾದ ಸುನೀತಿಯ ಮಗ ಧ್ರುವನು ಅಲ್ಲಿಗೆ ಬಂದು, ತಂದೆಯ ಬಳಿಗೆ ಹೋಗಿ, ತನ್ನನ್ನೂ ತೊಡೆಯ ಮೇಲೆ ಕೂಡಿಸಿಕೊಳ್ಳಬೇಕೆಂದು ಕೋರಿದನು.

ಹುಡುಗನ ಈ ಮಾತುಗಳು ಸುರುಚಿಯ ಕಿವಿಯ ಮೇಲೆ ಬಿದ್ದೊಡನೆಯೇ ಆಕೆ "ನೀನು ಸಿಂಹಾಸನದ ಮೇಲೇರಿ ಕುಳಿತುಕೊಳ್ಳಬೇಕಾದರೆ, ಇನ್ನೊಂದು ಜನ್ಮದಲ್ಲಿ ನನ್ನ ಹೊಟ್ಟೆಯಲ್ಲಿ ಹುಟ್ಟಿ ಬಂದರೆ ಮಾತ್ರ ಸಾಧ್ಯ. ಈ ಜನ್ಮದಲ್ಲಿ ಲಭ್ಯವಿಲ್ಲ" ಎಂದು ಕಿಡಿಕಿಡಿಯಾದಳು. ಮುಗ್ಧ ಬಾಲಕನಿಗೆ ತನ್ನ ಮಲತಾಯಿಯ ಮಾತುಗಳಿಂದ ಮನಸ್ಸಿಗೆ ನೋವಾಗಿ, ತನ್ನ ತಾಯಿಯಿದ್ದಲ್ಲಿಗೆ ಬಂದು ಎಲ್ಲವನ್ನೂ ತಿಳಿಸಿದನು. ಬಾಲಕನ ಮಾತುಗಳನ್ನು ಕೇಳಿ ಸುನೀತಿಗೆ ತುಂಬ ಸಂಕಟವಾಯಿತು. ಮಗನನ್ನು ನಾನಾ ರೀತಿಯಲ್ಲಿ ಸಮಾಧಾನಪಡಿಸಲು ಪ್ರಯತ್ನಿಸಿದಳು. ಅವನು ಸುಮ್ಮನಾಗಲಿಲ್ಲ. ಕಡೆಗೆ ತಾಯಿಯ ಅಪ್ಪಣೆಯನ್ನು ಪಡೆದು ಕಾಡಿಗೆ ತೆರಳಿ, ತಪಸ್ಸನ್ನು ಆಚರಿಸಿ, ಶ್ರೀಮನ್ನಾರಾಯಣನ ದರ್ಶನವನ್ನು ಪಡೆದನು. ಅನಂತರ ಅಪಾರವಾದ ಕೀರ್ತಿಯನ್ನು ಸಂಪಾದಿಸಿದನು. (ಭಾಗವತ IV–ಅ. 2)

ಭ್ರಾತೃವೆಂಬೆನೆ ನಿನ್ನ – ವಿಭೀಷಣನ್ನ ಭ್ರಾತೃ ನಿನ್ನಂತೆ ಕಾಯಿದನೆ

(ಸು. 120) ರಾವಣನ ತಮ್ಮನಾದ ವಿಭೀಷಣನು, ಅಣ್ಣನು ಸೀತಾಪಹರಣಮಾಡಿದ ಅಕಾರ್ಯವನ್ನು ಖಂಡಿಸಿ, ಅವನು ಶ್ರೀರಾಮನೊಂದಿಗೆ ಮೈತ್ರಿಯನ್ನು ಬೆಳೆಸಿ, ಆತನ ಹೆಂಡತಿಯನ್ನು ಹಿಂತಿರುಗಿಸುವುದು ಅವನ ಕರ್ತವ್ಯವೆಂದು ಹಿತೋಪದೇಶ ಮಾಡಿದನು. ವಿಭೀಷಣನ ಮಾತುಗಳು ರಾವಣನಿಗೆ ಹಿಡಿಸಲಿಲ್ಲ. ತಮ್ಮನನ್ನು ದ್ರೋಹಿಯೆಂದು ತೆಗಳಿ, ತನ್ನ ಪಕ್ಷದಿಂದ ಹೊರಹಾಕಿದನು. ವಿಭೀಷಣನು ರಾಮನಲ್ಲಿಗೆ ಬಂದು ಆತನಿಗೆ ಶರಣಾಗತನಾದನು. ರಾವಣನ ವಧಾನಂತರ ಶ್ರೀರಾಮನು ಲಂಕೆಯ ಆಧಿಪತ್ಯವನ್ನು ವಿಭೀಷಣನಿಗೆ ವಹಿಸಿಕೊಟ್ಟನು. (ರಾಮಾಯಣ - ಯುದ್ಧ ಕಾಂಡ)

ಪುತ್ರನೆಂಬೆನೆ ನಿನ್ನ – ಉಗ್ರಸೇನನ ಪುತ್ರ ನಿನ್ನಂತೆ ಕಾಯಿದನೆ

(ಸು. 120) ಕಂಸನ ತಂದೆಯಾದ ಉಗ್ರಸೇನನು ಮಗನ ಕೈಯಿಂದಲೇ ತುಂಬ ತೊಂದರೆಯನ್ನು ಅನುಭವಿಸಬೇಕಾಯಿತು. ಕಂಸನ ವಧೆಯಾದ ಬಳಿಕ ಶ್ರೀಕೃಷ್ಣ ಇವನಿಗೆ ಪಟ್ಟ ಕಟ್ಟಿದನು. (ಪುರಾಣನಾಮ ಚೂಡಾಮಣಿ, ಪು. 48)

ಆ ಜಲಧಿಯ ದರ್ಭಶಯನದಿ ನಿನ್ನನ್ನು ಜೋ ಜೋ ಜೋ ಜೋಯೆಂದು ಪಾಡಿದರಾರಯ್ಯ

(ಸು. 121) ಶ್ರೀರಾಮನು ಲಂಕೆಯ ಮೇಲೆ ದಂಡೆತ್ತಿ ಹೊರಟಾಗ, ಅಡ್ಡ ಬಂದ ಸಮುದ್ರವನ್ನು ದಾಟುವುದು ಹೇಗೆಂದು ಚಿಂತಾಕ್ರಾಂತನಾದನು. ಆಗ ವಿಭೀಷಣನ ಸಲಹೆಯ ಮೇರೆಗೆ ಸಮುದ್ರರಾಜನನ್ನು ಒಲಿಸಿಕೊಳ್ಳಲು ದರ್ಭೆಯ ಶಯನದ ಮೇಲೆ ಪವಡಿಸಿದನು. ಆಗಲೂ ಸಮುದ್ರರಾಜನು ಸಿಗ್ಗದಿರಲು ಶ್ರೀರಾಮನು ಕೋಪಗೊಂಡು ಬಾಣವನ್ನು ಪ್ರಯೋಗಿಸಲು ಸಿದ್ಧನಾಗಲು, ಆಗ ಸಮುದ್ರರಾಜನು ಬಂದು ಶರಣಾಗತ

ನಾಗುವನು. ಅನಂತರ ಸೇತುಬಂಧನ ಕಾರ್ಯ ಸುಗಮವಾಯಿತು. (ರಾಮಾಯಣ - ಯುದ್ಧಕಾಂಡ)

## ರಾಜಸೂಯಯಾಗದಲ್ಲಿ ರಾಜರಾಜರಿರಲು....ಈತನೇ ಸಭಾಪೂಜ್ಯನೆಂದು ಮನ್ನಿಸಿದನಾಗ

(ಕೀ. 122–ನು. 1) : ಧರ್ಮರಾಯನು ತಾನು ಕೈಕೊಂಡ ರಾಜಸೂಯಯಾಗ ನೆರವೇರಲು, ಆಗ ಯಾರಿಗೆ ಅಗ್ರಪೂಜೆಯನ್ನು ಮಾಡುವುದೆಂದು ಚಿಂತಾಕ್ರಾಂತನಾದನು. ಆಗ ಭೀಷ್ಮಾಚಾರ್ಯರು, ಶ್ರೀಕೃಷ್ಣನೊಬ್ಬನೆ ಈ ಪೂಜೆಗೆ ಅರ್ಹನೆಂದು ಹೇಳಲು, ಧರ್ಮ ರಾಯನು ಅಂತೆಯೇ ಶ್ರೀಕೃಷ್ಣನಿಗೆ ಪೂಜೆ ಮಾಡಿದನು. ಆ ಸಭೆಯಲ್ಲಿದ್ದ ಶಿಶುಪಾಲನಿಗೆ ಇದನ್ನು ನೋಡಿ ಸಹಿಸಲು ಅಸಾಧ್ಯವಾಯಿತು. ಕೂಡಲೇ ಕೃಷ್ಣನನ್ನು ಬಾಯಿಗೆ ಬಂದಂತೆ ನಿಂದಿಸಿದನು. ಆಗ ಶ್ರೀಕೃಷ್ಣನು, ಶಿಶುಪಾಲನ ತಾಯಿಗೆ ತಾನು ವಚನವಿತ್ತಂತೆ, ಆತನ ಬೈಗುಳ ನೂರಾಗುವವರೆಗೆ ಸುಮ್ಮನಿದ್ದು. ಅನಂತರ ತನ್ನ ಚಕ್ರದಿಂದ ಅವನನ್ನು ಸಂಹರಿಸಿ ದನು. (ಭಾರತ–ಸಭಾಪರ್ವ)

## ಹೀನ ಪೌಂಡ್ರಕನ ಶಿರವ ಜಾಣರಾಯ ತರಿದನಾಗ

(ಕೀ. 122-ನು. 3) ; ವಸುದೇವನಿಗೆ ಕಾಶೀರಾಜನ ಮಗಳಾದ ಸುತನು ಎಂಬುವಳ ಹೊಟ್ಟೆಯಲ್ಲಿ ಹುಟ್ಟಿದ ಮಗನೇ ಪೌಂಡ್ರಕ. ಈ ಕುಮಾರನು ಪ್ರಾಪ್ತವಯಸ್ಕನಾದ ಬಳಿಕ ವಸುದೇವನು ಅವನಿಗೆ ಅವನ ತಾತನ ರಾಜ್ಯಭಾರವನ್ನು ಒಪ್ಪಿಸಿ, ತನ್ನ ಊರಾದ ಮಥುರೆಗೆ ಬಂದನು. ಕಾಲಕ್ರಮದಲ್ಲಿ ದೇವಕಿಯನ್ನು ಮದುವೆಯಾಗಲು, ಆಕೆಯ ಹೊಟ್ಟೆಯಲ್ಲಿ ಶ್ರೀಕೃಷ್ಣನು ಜನಿಸಿದನು. ಶ್ರೀಕೃಷ್ಣನು ದಿನದಿನಕ್ಕೆ ಪ್ರವರ್ಧಮಾನಕ್ಕೆ ಬಂದಂತೆಲ್ಲ ಪೌಂಡ್ರಕನಿಗೆ ಆತನಲ್ಲಿ ಅಸೂಯೆ ಬೆಳೆಯಿತು. ಕಡೆಗೆ, ವಾಸುದೇವನೆಂಬ ಹೆಸರಿಗೆ ತಾನು ಮಾತ್ರ ಅರ್ಹನೆಂದು ಅಹಂಕಾರದಿಂದ ಶ್ರೀಕೃಷ್ಣನನ್ನು ಪ್ರತಿಭಟಿಸಿದನು. ಶ್ರೀಕೃಷ್ಣನು ದುರಹಂಕಾರಿಯಾದ ಪೌಂಡ್ರಕನೊಂದಿಗೆ ಯುದ್ಧ ಮಾಡಿ, ಅವನನ್ನು ಸಂಹರಿ ಸಿದನು. (ಭಾಗವತ-X (ಉತ್ತರಾರ್ಧ) - ಅ. 9)*

## ಚಕ್ರದಿಂದ ನಿಜಭಕ್ತ ಪರೀಕ್ಷಿತನ ಕಾಯ್ದ

(ಕೀ. 122-ನು. 4) : ಅಶ್ವತ್ಥಾಮಾಚಾರ್ಯರು ಪಾಂಡವರ ಮೇಲಿನ ಕೋಪದಿಂದ ಉತ್ತರೆಯ ಗರ್ಭದಲ್ಲಿದ್ದ ಪರೀಕ್ಷಿತನನ್ನು ಸಂಹರಿಸಲು ತಮ್ಮ ಬ್ರಹ್ಮಾಸ್ತ್ರವನ್ನು

---

* ಈತನು ಪುಂಡ್ರ ವಂಶದ ವಸುದೇವನ ಮಗನೆಂದೂ, ಶ್ರೀಕೃಷ್ಣನೊಂದಿಗೆ ಯುದ್ಧ ಮಾಡಿ ಸತ್ತನೆಂದೂ ಪಾಠ ಭೇದವಿದೆ. (ಪುರಾಣನಾಮ ಚೂಡಾಮಣಿ ಪು. 399.)

ಪ್ರಯೋಗಿಸಿದಾಗ, ಶ್ರೀಕೃಷ್ಣನು ಅದನ್ನು ಅಡ್ಡಗಟ್ಟಿ, ಅಶ್ವತ್ಥಾಮಾಚಾರ್ಯರಿಗೆ ಘೋರ ಶಾಪವನ್ನಿತ್ತನು. (ಭಾರತ-ಸೌಪ್ತಿಕ ಪರ್ವ)

ಪೊಕ್ಕುಳಲ್ಲಿ ಗಂಡು ಪಡೆದವರುಂಟೆ

(ಉ. 123) : ಶ್ರೀ ವಿಷ್ಣುವಿನ ನಾಭಿಕಮಲದಲ್ಲಿ ಚತುರ್ಮುಖ ಬ್ರಹ್ಮದೇವರು ಉದ್ಭವಿಸಿದ ಪ್ರಸಂಗ (ಭಾಗವತ III - ಅ. 2)

ಸಂತತ ಸುರರಿಗೆ ಪೀಯೂಷ ಉಣಿಸಿದ ಪಂಕ್ತಿಯೊಳಗೆ ಪರವಂಚನೆ ಮಾಡಿದ

(ಕೀ. 126-ನು. 1) : ಸಮುದ್ರಮಥನ ಕಾಲದಲ್ಲಿ ಉದ್ಭವಿಸಿದ ಅಮೃತವನ್ನು ಕಂಡು ದೇವಾಸುರರಲ್ಲಿ ಜಗಳ ಮೊದಲಾಯಿತು. ಆಗ ಶ್ರೀ ವಿಷ್ಣು ಮೋಹಿನೀ ಅವತಾರ ವನ್ನು ತಾಳಿ, ಅಮೃತಕಲಶವನ್ನು ಕೇಳಿ ಪಡೆದುಕೊಂಡನು. ದೇವಾಸುರರಿಗೆ ತಾನು ಹಂಚುವುದಾಗಿ ಹೇಳಿ, ರಾಕ್ಷಸರನ್ನು ವಂಚಿಸಿದ. (ಭಾಗವತ VIII-ಅ. 2)

ಭಸ್ಮಾಸುರನಿಗೆ ಭೋಗದಾಸೆಯ ತೋರಿ ಭಸ್ಮತ ಮಾಡಿದ

(ಕೀ. 126-ನು. 2): ಈಶ್ವರನು ಭಸ್ಮಾಸುರನ ಉಗ್ರತಪಸ್ಸಿಗೆ ಒಲಿದು, ಅವನನ್ನು ವರವನ್ನು ಬೇಡಿಕೊಳ್ಳಲು ಅನುಮತಿಯಿತ್ತನು. ಆಗ ಆ ದುಷ್ಟನು ತಾನು ಯಾರ ತಲೆಯ ಮೇಲೆ ಕೈಯಿಡುವೆನೋ ಅವರು ಭಸ್ಮವಾಗುವಂತೆ ವರವನ್ನು ಬೇಡಿದನು. ಈಶ್ವರನು ನಿರ್ವಾಹವಿಲ್ಲದೆ ಅಂತೆಯೇ ವರವಿತ್ತನು. ಆ ದುಷ್ಟ ರಾಕ್ಷಸನು ಆ ವರ ದೊರೆಯುವುದೇ ತಡ, ಈಶ್ವರನ ತಲೆಯ ಮೇಲೆ ಕೈಯಿಡಲು ಮುನ್ನುಗ್ಗಿದನು. ಆಗ ಈಶ್ವರ ದಿಕ್ಕುಗಾಣದೆ ವಿಷ್ಣುವನ್ನು ಮರೆಹೊಕ್ಕನು. ಉಪಾಯಗಾರನಾದ ವಿಷ್ಣು, ಸ್ತ್ರೀರೂಪವನ್ನು ಧರಿಸಿ, ಭಸ್ಮಾಸುರನ ಮುಂದೆ ಸುಳಿದು ನರ್ತನ ಮಾಡಲು ಆರಂಭಿಸಿದನು. ವೇಷಧಾರಿಯಾದ ವಿಷ್ಣು ಭಸ್ಮಾಸುರನಿಗೂ ನಾಟ್ಯ ಕಲಿಸುವ ನೆಪದಲ್ಲಿ ತನ್ನ ಕೈಯನ್ನು ತಲೆಯ ಮೇಲೆ ಇಟ್ಟು ಕೊಳ್ಳಲು, ಭಸ್ಮಾಸುರನೂ ಹಾಗೆಯೇ ಮಾಡಿದನು. ಆಗ ಆತನ ಕೈ ಸೋಂಕಿನಿಂದ ಅಲ್ಲಿಯೇ ಸುಟ್ಟು ಬೂದಿಯಾದನು. (ಬ್ರಹ್ಮಾಂಡ ಪುರಾಣ - ಶ್ವೇತಾಚಲ ಮಾಹಾತ್ಮ್ಯ, ಅ. 4)

ವಿದುರನ ಮನೆಯ ಪಾಲ್ಕುಡಿವರೇನೋ

(ಉ. 131) (ಉ. 144): ಶ್ರೀಕೃಷ್ಣನು ಪಾಂಡವರ ಪರವಾಗಿ ರಾಜ್ಯ ಬೇಡಲು ಹಸ್ತಿನಾವತಿಗಾಗಿ ಹೋದಾಗ ಅಲ್ಲಿ ತನಗಾಗಿ ಎದುರು ನೋಡುತ್ತಿದ್ದ ದುರ್ಯೋಧನನೇ

ಮೊದಲಾದ ಯಾರೊಬ್ಬರ ಮನೆಗೂ ಹೋಗದೆ, ತನ್ನ ಭಕ್ತನಾದ ವಿದುರನ ಮನೆಗೆ ಹೋದನು. ಬಡವನಾದ ಆತನು ಕೊಟ್ಟ ಒಂದು ತೊಟ್ಟು ಹಾಲನ್ನೇ ಕುಡಿದು ಸಂತೃಪ್ತ ನಾದನು. (ಭಾರತ - ಉದ್ಯೋಗ ಪರ್ವ)

## ಶಿವರೂಪದಲಿ ಹಿಂದೆ ಹರಿಯನೊಲಿಸಿದ ಮಂಚ

(ಕೀ. 132-ನು. 1) : ಆದಿಶೇಷನು ತನ್ನ ಹಿಂದಿನ ಜನ್ಮದಲ್ಲಿ ಶಿವನಾಗಿದ್ದು, ಶ್ರೀ ಹರಿಯನ್ನು ಪ್ರಸನ್ನೀಕರಿಸಿಕೊಂಡು ಶೇಷ ಪದವಿಯನ್ನು ಪಡೆದವನು. (ಶ್ರೀ ಹರಿಜನ ಪದ್ಧತಿ ಪು. 67)

## ತಾಲ ಮುಸಲ ಹಲವ ಪಿಡಿದಿರುವ ಮಂಚ

(ಕೀ. 132-ನು. 2) : ಶ್ರೀ ಕೃಷ್ಣನ ಅಣ್ಣನಾದ ಬಲರಾಮನು ಶೇಷಾಂಶನೆಂದು ಪ್ರಸಿದ್ಧಿಯಾಗಿರುವುದರಿಂದ ಇಲ್ಲಿ ಬಲರಾಮನ ಧ್ವಜಚಿಹ್ನೆಯಾದ ತಾಳೆಮರ ಮತ್ತು ಆತನ ಆಯುಧಗಳಾದ ಒನಕೆ, ನೇಗಿಲುಗಳನ್ನು ಶೇಷನಿಗೆ ಅನ್ವಯಿಸಿದೆ.

## ಭೀಮಾವರಜನೊಳು ಆವೇಶಿಸಿದ ಮಂಚ

(ಕೀ. 132-ನು. 3) : ನರ-ನಾರಾಯಣರೆಂದು ಸುಪ್ರಸಿದ್ಧವಾಗಿರುವ ಅರ್ಜುನ-ಶ್ರೀಕೃಷ್ಣರಲ್ಲಿ, ಅರ್ಜುನನು ಶೇಷಾವತಾರಿಯೆಂದು ಹೇಳಲಾಗುತ್ತದೆ. (ಶ್ರೀ ಹರಿಜನ ಪದ್ಧತಿ ಪು. 68)

## ರಾಮನನುಜನಾಗಿ ರಣವ ಜಯಿಸಿದ ಮಂಚ

(ಕೀ. 132-ನು. 3) : ಇದು ಶೇಷಾಂಶನಾದ ಲಕ್ಷ್ಮಣನನ್ನು ನಿರ್ದೇಶಿಸುತ್ತದೆ.

## ದೇವಕೀ ಜಠರದಲ್ಲಿ ಸೆಳೆಸಿಕೊಂಡ ಮಂಚ

(ಕೀ. 132-ನು. 4) : ದೇವಕಿಯ ಏಳನೆಯ ಗರ್ಭದಲ್ಲಿ ಶೇಷಾಂಶನಾದ ಬಲ ರಾಮನು ಪ್ರವೇಶಿಸಲು, ಆಗ ಭಗವಂತನು ಯೋಗಮಾಯೆಯ ಮೂಲಕ ಆ ಮಗುವನ್ನು ರೋಹಿಣಿಯ ಗರ್ಭದಲ್ಲಿಡುವಂತೆ ವ್ಯವಸ್ಥೆ ಮಾಡಿದನು. ಆತನೇ ಮುಂದೆ ಬಲರಾಮನೆಂದು ಹೆಸರು ತಾಳಿ ಬೆಳೆದನು. (ಭಾಗವತ (ಪೂರ್ವಾರ್ಧ) – ಅ. 1)

## ಕಲ್ಲು ಕಡೆಯುತ್ತಿರಲು ಅಮೃತವೇ ಪುಟ್ಟಿತು

(ಕೀ. 134ಸಿ–ನು. 1) : ದೇವಾಸುರರು ಕ್ಷೀರಸಮುದ್ರವನ್ನು ಮಥಿಸಲೆಂದು, ಮಂದರ ಪರ್ವತವನ್ನು ಕಡೆಗೋಲನ್ನಾಗಿಯೂ, ವಾಸುಕಿಯನ್ನು ಹಗ್ಗವನ್ನಾಗಿಯೂ ಮಾಡಿಕೊಂಡ ಪ್ರಸಂಗವನ್ನು ಕುರಿತದ್ದು. (ಭಾಗವತ VIII, ಅ. 2)

## ಕಲ್ಲು ಲಂಕೆಗೆ ಮಾರ್ಗ ಚೆನ್ನಾಗಿ ಶೋಭಿಸಿತು

(ಕೀ. 134ಸಿ-ನು. 1) : ಶ್ರೀ ರಾಮನು ಕಪಿಸೇನೆಯ ಸಹಾಯದಿಂದ ಲಂಕೆಗೆ ನಿರ್ಮಿಸಿದ ಸೇತುವೆಯ ಸಂದರ್ಭವನ್ನು ಕುರಿತಿದ್ದು. (ರಾಮಾಯಣ - ಯುದ್ಧಕಾಂಡ)

## ಅಂಬರೀಷ

(ಕೀ. 138-ನು. 2) : ಈತನೊಬ್ಬ ವಿಷ್ಣು ಭಕ್ತ. ಈತನ ಏಕಾದಶಿ ವ್ರತವನು ಭಂಗ ಮಾಡಬೇಕೆಂದು ದುರ್ವಾಸನು ಪ್ರಯತ್ನಿಸಲು, ಆಗ ವಿಷ್ಣು ತನ್ನ ಸುದರ್ಶನ ಚಕ್ರ ವನ್ನು ಪ್ರಯೋಗಿಸುವನು. ದುರ್ವಾಸನು ಆ ಚಕ್ರದ ಹಾವಳಿಯನ್ನು ತಡೆಯಲಾರದೆ ಶ್ರೀ ವಿಷ್ಣುವನ್ನು ಮರೆಹೊಗಲು,ಆತನು ತನ್ನ ಭಕ್ತನಾದ ಅಂಬರೀಷನನ್ನೇ ಆಶ್ರಯಿಸುವಂತೆ ಸಲಹೆ ಮಾಡುವನು. ದುರ್ವಾಸನು ಅಂತೇ ಮಾಡಿ ತನಗ ಒದಗಿದ್ದ ಆಪತ್ತನ್ನು ನಿವಾರಿಸಿ ಕೊಳ್ಳುವನು. (ಭಾಗವತ IX, ಅ. 2)

## ಅತ್ರಿಋಷಿ

(ಕೀ. 138-ನು. 2( : ಈತನು ಸಪ್ತರ್ಷಿಗಳಲ್ಲಿ ಒಬ್ಬನು. ಬ್ರಹ್ಮಮಾನಸ ಪುತ್ರನು. ಈತನ ಪತ್ನಿಯಾದ ಅನುಸೂಯೆಯ ಪಾತಿವ್ರತ್ಯವನ್ನು ಪರೀಕ್ಷಿಸಲೆಂದು ಬಂದ ಹರಿ ಹರ ಬ್ರಹ್ಮಾದಿಗಳು ಆಕೆಗೆ ಸೋತು ಹಸುಳೆಗಳಾದರು. ಕಡೆಗೆ ಅವರ ಅನುಗ್ರಹದಿಂದ ದತ್ತಾ ತ್ರೇಯ, ಚಂದ್ರ ಮತ್ತು ದುರ್ವಾಸರೆಂಬ ಮಕ್ಕಳನ್ನು ಪಡೆದಳು. (ಪುರಾಣನಾಮ ಚೂಡಾ ಮಣಿ, ಪು. 11)

## ಉದ್ಧವ

(ಕೀ. 138-ನು. 2) : ಈತನು ಶ್ರೀ ಕೃಷ್ಣನ ಪರಮಭಕ್ತ. ಪರಮಜ್ಞಾನಿಯಾದ ಈತನನ್ನು ಶ್ರೀಕೃಷ್ಣನು, ಗೋಕುಲದಲ್ಲಿದ್ದ ತನ್ನ ತಂದೆ ತಾಯಿಯರಿಗೂ, ತನ್ನ ಒಡನಾಡಿ ಗಳಾಗಿದ್ದ ಗೋಪಿಯರಿಗೂ ಸಮಾಧಾನ ಹೇಳಿಬರುವಂತೆ ಕಳುಹಿಸಿಕೊಟ್ಟನು. ಗೋಕುಲ

ವನ್ನು ಪ್ರವೇಶಿಸಿದ ಉದ್ಧವನು ಆ ಗೋಪಿಯರ ಅತಿಶಯವಾದ ಭಕ್ತಿಯನ್ನು ಕಂಡು ಮಾರುಹೋದನು. ಪರಿಶುದ್ಧವಾದ ಭಕ್ತಿ, ಜ್ಞಾನಕ್ಕಿಂತಲೂ ಮಿಗಿಲಾದುದೆಂದು ತಿಳಿದನು. (ಭಾಗವತ X - ಅ. 6)

ರುಕುಮಾಂಗದ

(ಕೀ. 138-ನು. 3) (ಕೀ. 142-ನು. 1) (ಕೀ. 158-ನು. 3) : ಈತನೊಬ್ಬ ವಿಷ್ಣುಭಕ್ತ. ಏಕಾದಶಿ ವ್ರತವನ್ನು ಆಚರಿಸುವುದರಲ್ಲಿ ಪರಮನಿಷ್ಠೆಯುಳ್ಳವನು. ಒಮ್ಮೆ ಈತನು ಮೋಹಿನಿ ಎಂಬಾಕೆಯ ಮಾತಿಗೆ ಕಟ್ಟುಬಿದ್ದು. ಏಕಾದಶಿ ವ್ರತವನ್ನು ಭಂಗಮಾಡಲು ಇಚ್ಛಿಸದೆ, ತನ್ನ ಮಗನಾದ ಧರ್ಮಾಂಗದನ ತಲೆಯನ್ನೇ ಬಲಿ ಕೊಡಲು ಸಿದ್ಧವಾದನು. ಆಗ ಶ್ರೀಮನ್ನಾರಾಯಣನು ಪ್ರತ್ಯಕ್ಷನಾಗಿ, ಆಗಲಿದ್ದ ಆಪತ್ತನ್ನು ಪರಿಹರಿಸಿದನು. (ಪುರಾಣ-ಭಾರತ ಕೋಶ, ಪು. 496)

ಪರಾಶರ

(ಕೀ. 138-ನು. 2): ವಸಿಷ್ಠರ ಮೊಮ್ಮಗನಾದ ಈತ ನೀತಿ ನಿರೂಪಣೆಯಲ್ಲಿ ಎತ್ತಿದ ಕೈ. ಈತನ ಬೋಧೆ ಪರಾಶರ ಗೀತೆಯೆಂದು ಪ್ರಸಿದ್ಧವಾಗಿದೆ. ಈತನ ಮಗನೇ ಪರಮ ಪೂಜ್ಯನಾದ ವೇದವ್ಯಾಸ ಋಷಿ. (ಪುರಾಣನಾಮ ಚೂಡಾಮಣಿ, ಪು. 376-377)

ಶೌನಕ

(ಕೀ. 138-ನು. 5) : ಈತ ಭೃಗುವಂಶದ ಮಹರ್ಷಿ. ನೈಮಿಷಾರಣ್ಯದಲ್ಲಿ ವಾಸ ವಾಗಿದ್ದ ಕುಲಪತಿಗಳು. ಸೂತ ಪೌರಾಣಿಕನಿಂದ ಪುರಾಣಗಳನ್ನೂ ಇತಿಹಾಸಗಳನ್ನೂ ಕೇಳಿದ ಮಹರ್ಷಿಗಳಲ್ಲಿ ಮುಖ್ಯರು. (ಪುರಾಣನಾಮ ಚೂಡಾಮಣಿ, ಪು. 571)

ಕಪಿಲಯೋಗಿ

(ಕೀ. 138-ನು. 5) : ಶ್ರೀ ವಿಷ್ಣುವಿನ ಅಂಶರಾದ ಕಪಿಲ ಮಹರ್ಷಿಗಳು, ಕರ್ದಮ ಮತ್ತು ದೇವಹೂತಿಯರ ಮಗ. ಸಾಂಖ್ಯಸೂತ್ರಗಳನ್ನು ರಚಿಸಿದ ಮಹಿಮರು. (ಭಾಗ ವತ-I, ಅ. 1)

ಆ ಮರ ಈ ಮರ ಧ್ಯಾನಿಸುತಿರುವಾಗ ರಾಮ ರಾಮ ಎಂಬ ನಾಮವೇ ಕಾಯ್ತೊ

(ಕೀ. 140-ನು. 1) : ಬೇಡನಾದ ವಾಲ್ಮೀಕಿ "ಆ ಮರ ಈ ಮರ" ಎಂಬ ಶಬ್ದ

ಗಳನ್ನು ಪುನಃ ಪುನಃ ಉಚ್ಚರಿಸುತ್ತಿರುವಾಗ ಅದು ತಾನಾಗಿ ರಾಮಮಂತ್ರವಾಗಿ ಪರಿಣಮಿಸಿ ತೆಂದೂ, ಅನಂತರ ಆತನು ರಾಮಾಯಣವನ್ನು ಬರೆದನೆಂದೂ ಪ್ರತೀತಿ.

### ಕುರು ಪಿತಾಮಹನಿಂದ ಹೂವಾಯ್ತು

(ಕೀ. 142-ನು. 1) (ಕೀ. 148-ನು. 1) : ಶ್ರೀ ಕೃಷ್ಣನ ಭಕ್ತರಾದ ಭೀಷ್ಮಾಚಾರ್ಯರು ಆತನ ನಾಮಸ್ಮರಣೆಯಿಂದ ರಣರಂಗವಲ್ಲಿಯೂ ಪರಮಾತ್ಮನ ಪ್ರಸಾದವನ್ನು ಪಡೆದ ಪುಣ್ಯಪುರುಷರು. ಶ್ರೀ ಕೃಷ್ಣನು ಭಾರತ ಯುದ್ಧದಲ್ಲಿ ಆಯುಧವನ್ನು ಹಿಡಿಯುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದನಷ್ಟೆ. ಆದರೆ, ಭೀಷ್ಮರು ಯುದ್ಧ ಮಾಡುತ್ತಿರುವಲ್ಲಿ ಅವರು ಬಿಟ್ಟ ಬಾಣ ಶ್ರೀಕೃಷ್ಣನನ್ನು ತಾಕಿತು. ಆಗ ಶ್ರೀ·ಕೃಷ್ಣನು ತನ್ನ ಸುದರ್ಶನ ಚಕ್ರವನ್ನು ತೆಗೆದುಕೊಂಡು ಭೀಷ್ಮರತ್ತ ಧಾವಿಸಿದನು. ಆಗ ಭಗವದ್ಭಕ್ತರಾದ ಭೀಷ್ಮರು ಆತನನ್ನು ಮುಕ್ತ ಕಂಠದಿಂದ ಕೊಂಡಾಡಿ ಆತನ ಅನುಗ್ರಹವನ್ನು ಸಂಪಾದಿಸಿದರು. (ಭಾರತ-ಭೀಷ್ಮ ಪರ್ವ)

### ನಿಜಶುಕಮುನಿಯಿಂದ ಪರಿಪಕ್ವವಾಯಿತು

(ಕೀ. 142-ನು. 2) ; ಕೃಷ್ಣ ದ್ವೈಪಾಯನ ಋಷಿಗಳ ಮಗನಾದ ಶುಕಾಚಾರ್ಯರು ಪರೀಕ್ಷಿತ ಮಹಾರಾಜನಿಗೆ ಭಾಗವತವನ್ನು ಹೇಳಿದ ಮಹಾಮಹಿಮರು. (ಪುರಾಣನಾಮ ಚೂಡಾಮಣಿ, ಪು. 565-66)

### ಭಗೀರಥಗೆ ಶ್ರೀಗಂಗೆ ಬಂದಂತೆ

(ಉ. 144) : ಇಕ್ಷ್ವಾಕು ವಂಶದ ದಿಲೀಪನ ಮಗನಾದ ಭಗೀರಥನು ತನ್ನ ಅಜ್ಜಂದಿರಾದ ಅರುವತ್ತು ಸಾವಿರ ಮಂದಿ ಸಗರ ಪುತ್ರರ ಸದ್ಗತಿಯ ಸಲುವಾಗಿ ದೇವಗಂಗೆಯನ್ನು ಕರೆತರುತ್ತಿರಲು, ಮಾರ್ಗಮಧ್ಯದಲ್ಲಿ ಈಶ್ವರನು ಆಕೆಯನ್ನು ತನ್ನ ಜಟೆಯಲ್ಲಿ ಹುದುಗಿಸಿಕೊಂಡನು. ಹತಾಶನಾದ ಭಗೀರಥನು ಉಗ್ರತಪಸ್ಸನ್ನು ಕೈಕೊಂಡು ಈಶ್ವರನನ್ನು ಒಲಿಸಿಕೊಂಡು ಗಂಗೆಯನ್ನು ಪಡೆದು, ಶಾಪಗ್ರಸ್ತರಾಗಿದ್ದ ತನ್ನ ಅಜ್ಜಂದಿರಿಗೆಲ್ಲ ಸದ್ಗತಿಯನ್ನು ದೊರಕಿಸಿಕೊಟ್ಟನು. (ಪುರಾಣನಾಮ ಚೂಡಾಮಣಿ, ಪು. 426)

### ಮುಚುಕುಂದಗೆ ಶ್ರೀಮುಕುಂದ ಬಂದಂತೆ

(ಉ. 144) : ಮಾಂಧಾತನ ಮಕ್ಕಳಲ್ಲಿ ಒಬ್ಬನಾದ ಈತನು ದೇವತೆಗಳಿಗೆ

ಆಪತ್ಕಾಲದಲ್ಲಿ ನೆರವಿತ್ತುದುದರಿಂದ ಅವರು ಇವನಿಗೆ ಸುಖನಿದ್ರೆಯನ್ನು ಅನುಗ್ರಹಿಸಿ, ಶ್ರೀಕೃಷ್ಣನ ಆಗಮನದಿಂದ ಅವನ ಇಷ್ಟಾರ್ಥಗಳೆಲ್ಲವೂ ನೆರವೇರುವುದೆಂದು ಹೇಳಿದರು. ಅದೇ ಮೇರೆಗೆ ಮುಚುಕುಂದನು ಕತ್ತಲೆಯ ಗವಿಯೊಂದರಲ್ಲಿ ಮಲಗಿ ಗಾಢನಿದ್ರಾಪರವಶನಾದನು. ಇತ್ತ, ಶ್ರೀ ಕೃಷ್ಣನನ್ನು ಕಾಲಯವನನೆಂಬ ಮಹಾಬಲಶಾಲಿ ಮದೋನ್ಮತ್ತನಾಗಿ ಬೆನ್ನಟ್ಟಿ ಬರಲು, ಆತನನ್ನು ಉಪಾಯಾಂತರದಿಂದ ಕೊಲ್ಲಿಸಬೇಕೆಂದು ಬಯಸಿ, ಉದ್ದೇಶಪೂರ್ವಕ ವಾಗಿ ಮುಚುಕುಂದನು ಮಲಗಿದ್ದ ಗವಿಯನ್ನು ಹೊಕ್ಕನು. ಕಾಲಯವನನು ಕತ್ತಲೆಯಲ್ಲಿ ಮಲಗಿದ್ದ ಮುಚುಕುಂದನನ್ನು ಎಡವಿ, ಆತನೇ ಕೃಷ್ಣನಿರಬೇಕೆಂದು ತಿಳಿದು, ಆತನನ್ನು ಕಾಲಿನಿಂದ ಒದ್ದನು. ನಿದ್ರಾಭಂಗಿತನಾದ ಮುಚುಕುಂದನು ಎದ್ದು, ಎದುರಿನಲ್ಲಿ ನಿಂತಿದ್ದ ಕಾಲಯವನನನ್ನು ಕೋಪಾರುಣನೇತ್ರನಾಗಿ ನೋಡಿದ ಕೂಡಲೇ ಕಾಲಯವನನು ಸುಟ್ಟು ಬೂದಿಯಾದನು. ಅನಂತರ ಮರೆಯಲ್ಲಿ ಅಡಗಿದ್ದ ಶ್ರೀಕೃಷ್ಣನು ಆತನ ಎದುರಿನಲ್ಲಿ ಬರಲು, ಪರಮಾತ್ಮನ ಲಕ್ಷಣಗಳನ್ನು ಗ್ರಹಿಸಿ, ಆತನು ಯಾರೆಂದು ಕೇಳಿ ತಿಳಿದನು. ಆಗ ಮುಕುಂದನು ಮುಚುಕುಂದನ ಮನೋಭಿಲಾಷೆಯನ್ನು ಅರಿತು ಅವನನ್ನು ಪೂರ್ಣವಾಗಿ ಅನುಗ್ರಹಿಸಿದನು. (ಭಾಗವತ X – ಉತ್ತರಾರ್ಧ–ಅ. 7)

### ಧರ್ಮರಾಯ ಕಾಲಂ ತೊಳೆವ ಕೀಳುಂ ಊಳಿಗಕ್ಕಿಕ್ಕನೆ

(ಕೀ. 148–ನು. 2) : "ಮಮ ಪ್ರಾಣಾ ಹಿ ಪಾಂಡವಾಃ" ಎಂದು ಭಾವಿಸಿದ್ದ ಶ್ರೀಕೃಷ್ಣನು ಪಾಂಡವರ ಸಲುವಾಗಿ ಯಾವ ಸೇವೆಯನ್ನಾದರೂ ಮಾಡಲು ಸಿದ್ಧನಿದ್ದನೆಂಬ ಭಾವ ಇಲ್ಲಿ ಅಡಗಿದೆ.

### ಬೋವನ ಮಾಡನೆ ಪಾರ್ಥನು ಬಂಡಿಯ

(ಕೀ. 148–ನು. 2) : ಕೌರವ ಪಾಂಡವರಿಗೆ ಯುದ್ಧ ಮೊದಲಾಗುವ ಮುಂಚೆ ಶ್ರೀ ಕೃಷ್ಣನನ್ನು ಕಾಣಲು ಹೋಗಿದ್ದ ಅರ್ಜುನನು ಆತನನ್ನು ತನ್ನ ಪಕ್ಷದಲ್ಲಿರುವಂತೆ ಬೇಡಿ ಕೊಂಡನಷ್ಟೆ. ಆಗ ಶ್ರೀಕೃಷ್ಣನು ತಾನು ಯುದ್ಧದಲ್ಲಿ ಪಾತ್ರವಹಿಸುವುದಿಲ್ಲವೆಂದೂ, ತೀರ ಸುಮ್ಮನೆ ಇರಲಾರೆನೆಂದೂ ತಿಳಿಸಿ, ಅರ್ಜುನನ ರಥದ ಸಾರಥ್ಯವನ್ನು ವಹಿಸಿದ ಸಂದರ್ಭ ವನ್ನು ಕುರಿತದ್ದು. (ಭಾರತ – ಉದ್ಯೋಗಪರ್ವ)

### ಒಂದು ವೃಕ್ಷದಲ್ಲಿ ಎರಡುಂ ಪಕ್ಷಿಗಳು ಒಂದೇ ಗೂಡಿನಲ್ಲಿ ಇರುತಿಹವು........ ಫಲಗಳನುಣ್ಣದುಂ ರಂಗ

(ಕೀ. 157-ನು. 1) : ಈ ಒಟ್ಟು ನುಡಿ "ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ

ಅಭಿಚಾಕಶೀತಿ" (ಮುಂಡಕೋಪನಿಷತ್ತು, ಮುಂಡಕ-II, 1) ಎಂಬ ಸಂಸ್ಕೃತ ರಚನೆಯ ಅನುವಾದ. ಜೀವಾತ್ಮ ಪರಮಾತ್ಮ ಎಂಬ ಎರಡು ಹಕ್ಕಿಗಳಲ್ಲಿ, ಜೀವಾತ್ಮನು ತಾನು ನೆಲಸಿರುವ ವೃಕ್ಷದಲ್ಲಿ ಲಭಿಸುವ ಸುಖ ದುಃಖಗಳನ್ನೆಲ್ಲ ತಿನ್ನುವ ಅಭಿಲಾಷೆಯುಳ್ಳದ್ದು. ಪರಮಾತ್ಮನೆಂಬ ಪಕ್ಷಿಯಾದರೋ ಇವುಗಳಿಗೆಲ್ಲ ಹೊರತಾದುದರಿಂದ ಅದು ಕೇವಲ ನೋಡು ತ್ತಲೇ ಇರುವುದು. ಆತ್ಮ-ಪರಮಾತ್ಮರ ಪರಸ್ಪರ ಸಂಬಂಧವನ್ನೂ, ಆ ಎರಡರಲ್ಲಿರುವ ವಿಶಿಷ್ಟ ವ್ಯತ್ಯಾಸವನ್ನೂ ವ್ಯಕ್ತಪಡಿಸುವ ಈ ಆರ್ಷೇಯ ವಾಣಿ ಸುಪ್ರಸಿದ್ಧವಾದುದು.

## ಆಧಾರ ಗ್ರಂಥಗಳು


1 ಪುರಾಣನಾಮ ಚೂಡಾಮಣಿ (1941) : ಲೇ : ಬೆನಗಲ್ ರಾಮರಾವ್
ಪಾನ್ಯಂ ಸುಂದರಶಾಸ್ತ್ರಿ

2 ಪುರಾಣ – ಭಾರತ ಕೋಶ (1975) : ಲೇ : ಯಜ್ಞನಾರಾಯಣ ಉಡುಪ

3 ಶ್ರೀಮದ್ಭಾಗವತ ಕಥಾಸಾರ (1974) : ಅನುವಾದಕರು :
ಸುಬೋಧ ರಾಮರಾವ್

4 ಜೈಮಿನಿ ಭಾರತ (1973) : ಅನುವಾದಕರು :
ಕಡಬದ ನಂಜುಂಡ ಶಾಸ್ತ್ರಿಗಳು
ಎನ್. ರಂಗನಾಥ ಶರ್ಮ

5 ಶ್ರೀ ಹರಿಭಜನ ಪದ್ಧತಿ (1981) ; ಬಿ. ಭೀಮರಾವ್


## ಸಂಕೇತಗಳ ವಿವರ

ಅ.= ಅಧ್ಯಾಯ, ಉ.= ಉಗಾಭೋಗ, ಕೀ.= ಕೀರ್ತನೆ, ನು.= ನುಡಿ,
ಪು.= ಪುಟ, ಸು.= ಸುಳಾದಿ

# ಅನುಬಂಧ ೩

## ಹರಿದಾಸರ ಸಂಕ್ಷಿಪ್ತ ಪರಿಚಯ

### 1 ಶ್ರೀಪಾದರಾಜರು

(ಕ್ರಿ.ಶ. 1406-1504): ಶ್ರೀಪದ್ಮನಾಭತೀರ್ಥರಿಂದ ಬೆಳೆಸೆಯುವರಾದ ಶ್ರೀಸ್ವರ್ಣವರ್ಣತೀರ್ಥರು ತಮ್ಮ ಉತ್ತರಾಧಿಕಾರಿಯನ್ನಾಗಿ ಆರಿಸಿಕೊಂಡ ಲಕ್ಷ್ಮೀನಾರಾಯಣರೇ ಶ್ರೀಪಾದರಾಜರು. ಅಬ್ಬೂರಿನಲ್ಲಿ ನೋಡಿದ ಲಕ್ಷ್ಮೀನಾರಾಯಣನಿಗೆ ಬಾಲ್ಯದಲ್ಲಿಯೇ ಸಂನ್ಯಾಸವಿತ್ತು ಲಕ್ಷ್ಮೀನಾರಾಯಣತೀರ್ಥರೆಂದು ಆಶ್ರಮನಾಮವನ್ನಿತ್ತರು. ಇವರ ವೇದಾಂತ ವಿದ್ಯಾಭ್ಯಾಸ ಶ್ರೀ ವಿಬುಧೇಂದ್ರತೀರ್ಥರ ನೇತೃತ್ವದಲ್ಲಿ ಆಯಿತು. ಶ್ರೀ ವಿಬುಧೇಂದ್ರರು ತಮ್ಮ ಶಿಷ್ಯರಾದ ಶ್ರೀ ಲಕ್ಷ್ಮೀನಾರಾಯಣತೀರ್ಥರೊಂದಿಗೆ ಸಂಚರಿಸುತ್ತಿರಲು ಆಗ ಕೊಪ್ಪ ನರಸಿಂಹ ಕ್ಷೇತ್ರದಲ್ಲಿ ಉತ್ತರಾದಿಮಠದ ಪೀಠಾಧಿಪತಿಗಳಾದ ಶ್ರೀ ರಘೋತ್ತಮ ತೀರ್ಥರ ಭೇಟಿಯಾಯಿತು. ಇನ್ನೂ ತರುಣರಾಗಿದ್ದ ಶ್ರೀಲಕ್ಷ್ಮೀನಾರಾಯಣತೀರ್ಥರ ಪಾಂಡಿತ್ಯವನ್ನು ಕಂಡು ಮೆಚ್ಚಿಕೊಂಡ ಶ್ರೀ ರಘೋತ್ತಮ ತೀರ್ಥರು ಬಾಲಯತಿಯನ್ನು ಆಶೀರ್ವದಿಸಿ ಶ್ರೀಪಾದರಾಜರೆಂದು ಕರೆದರು. ಅಂದಿನಿಂದ ಶ್ರೀಲಕ್ಷ್ಮೀನಾರಾಯಣತೀರ್ಥರ ಹೆಸರು ಶ್ರೀಪಾದರಾಜರೆಂದೇ ಪ್ರಸಿದ್ಧಿಗೆ ಬಂದಿತು. ಶ್ರೀ ಸ್ವರ್ಣವರ್ಣತೀರ್ಥರು ವೃಂದಾವನಸ್ಥರಾದ ಬಳಿಕ ಶ್ರೀಪಾದರಾಜರು ಶ್ರೀರಂಗದಲ್ಲಿದ್ದ ತಮ್ಮ ಮಠವನ್ನು ಮುಳುಬಾಗಿಲಿಗೆ ಬದಲಾಯಿಸಿದರು. ಆಗ ಅಲ್ಲಿದ್ದ ಸಾಳುವ ನರಸಿಂಹನ ಆದರ, ಗೌರವಗಳಿಗೆ ಪಾತ್ರರಾದ ಶ್ರೀಪಾದರಾಜರು ನರಸಿಂಹವನದ ಬಳಿಯೇ ತಮ್ಮ ಮಠವನ್ನು ಸ್ಥಾಪಿಸಿದರು, ಅನತಿ ಕಾಲದಲ್ಲಿಯೇ ಅದು ವಿದ್ಯಾಕೇಂದ್ರವಾಯಿತು. ಶ್ರೀ ವ್ಯಾಸರಾಯರಂತಹ ಯತಿಗಳೂ ಅವರಲ್ಲಿ ಬಂದು ವೇದಾಂತವಿದ್ಯೆಯನ್ನು ಅಭ್ಯಸಿಸಿದರು. ಶ್ರೀಪಾದರಾಜರು ಸಂಸ್ಕೃತದಲ್ಲಿ 'ವಾಗ್ವಜ್ರ' ವೆಂಬ ಶಾಸ್ತ್ರಗ್ರಂಥವನ್ನು ರಚಿಸಿರುವರು. ದೇವರ ಪೂಜಾ ಕಾಲದಲ್ಲಿ ತಾವೇ ರಚಿಸಿದ ಕನ್ನಡ ದೇವರನಾಮಗಳನ್ನು ಹಾಡುವ ಒಂದು ನೂತನ ಪದ್ಧತಿಯನ್ನು ಬಳಕೆಗೆ ತಂದರು. ಇದೇ ಹರಿದಾಸ ಸಾಹಿತ್ಯದ ಪ್ರಾರಂಭಕ್ಕೆ ಶ್ರೀಕಾರವಾಯಿತು. ಶ್ರೀಪಾದರಾಜರು

'ರಂಗವಿಠಲ' ಎಂಬ ಅಂಕಿತದಿಂದ ಕೀರ್ತನೆ, ಸುಳಾದಿ, ಉಗಾಭೋಗ, ವೃತ್ತನಾಮ, ದಂಡಕ ಮೊದಲಾದ ವಿವಿಧ ಪ್ರಕಾರಗಳನ್ನು ರಚಿಸಿ ಇತರರಿಗೆ ಮೇಲ್ಪಂಕ್ತಿ ಹಾಕಿಕೊಟ್ಟರು. ಇವರು ಧ್ರುವಾಂಶರೆಂದು ಪ್ರತೀತಿ.

## 2 ಶ್ರೀವ್ಯಾಸರಾಯರು

(ಕ್ರಿ.ಶ. 1447-1539) : ಶ್ರೀಬ್ರಹ್ಮಣ್ಯತೀರ್ಥರ ಕರಸಂಜಾತರಾದ ಶ್ರೀ ವ್ಯಾಸರಾಯರ ಜನ್ಮಸ್ಥಳ ಕರ್ನಾಟಕದಲ್ಲಿ ಕಾವೇರೀ ತೀರದಲ್ಲಿರುವ ಬನ್ನೂರು. ಇವರ ಪೂರ್ವಾಶ್ರಮದ ಹೆಸರು ಯತಿರಾಜ. ಶ್ರೀವ್ಯಾಸರಾಜರು ತಮ್ಮ ಗುರುಗಳ ಅಪೇಕ್ಷೆಯಂತೆ ಶ್ರೀಪಾದರಾಜರಲ್ಲಿ ತಮ್ಮ ವೇದಾಂತ ವಿದ್ಯೆಯನ್ನು ವ್ಯಾಸಂಗ ಮಾಡಿ, ಅವರ ಪೂರ್ಣಾನುಗ್ರಹಕ್ಕೆ ಪಾತ್ರರಾದರು. ಸಂಸ್ಕೃತದಲ್ಲಿ ನ್ಯಾಯಾಮೃತ, ತಾತ್ಪರ್ಯ ಚಂದ್ರಿಕ ಮತ್ತು ತರ್ಕತಾಂಡವ ಎಂಬ ಶಾಸ್ತ್ರಗ್ರಂಥಗಳನ್ನು ರಚಿಸಿ ಅಖಂಡವಾದ ಕೀರ್ತಿಯನ್ನು ಸಂಪಾದಿಸಿದರು. ಇಷ್ಟೇ ಅಲ್ಲದೆ, ತಮ್ಮ ಗುರುಗಳ ಮೇಲ್ಪಂಕ್ತಿಯನ್ನೇ ಅನುಸರಿಸಿ ಹಲವಾರು ದೇವರನಾಮುಗಳನ್ನು ಕನ್ನಡದಲ್ಲಿ ರಚಿಸಿದರು. ಇವರ ಅಂಕಿತ "ಶ್ರೀಕೃಷ್ಣ". ಈ ವೇಳೆಗೆ ಜನಾದರಣೆಯನ್ನು ಗಳಿಸಿದ್ದ ಈ ಕನ್ನಡ ಕೀರ್ತನೆಗಳ ಕೈಂಕರ್ಯ ಅವ್ಯಾಹತವಾಗಿ ನಡೆಯುವಂತೆ ಶ್ರೀ ವ್ಯಾಸರಾಯರು, ಪುರಂದರದಾಸರು, ಕನಕದಾಸರು ಮೊದಲಾದ ಹರಿದಾಸರುಗಳನ್ನು ಒಳಗೊಂಡಂತೆ ಒಂದು ಹರಿದಾಸವೃಂದವನ್ನೇ ಏರ್ಪಡಿಸಿದರು. ಇದೇ 'ದಾಸಕೂಟ'ದ ಉಗಮಕ್ಕೆ ಕಾರಣವಾಯಿತು. ಶ್ರೀವ್ಯಾಸರಾಯರು ವಿಜಯನಗರದ ಅರಸರಲ್ಲಿ ಅಗ್ರಗಣ್ಯನಾದ ಶ್ರೀ ಕೃಷ್ಣದೇವರಾಯನಿಗೆ ರಾಜಗುರುಗಳಾಗಿದ್ದರು. ಆತನಿಗೆ ಒದಗಿದ್ದ ಕುಹುಯೋಗದ ವಿಪತ್ತನ್ನು ಹೋಗಲಾಡಿಸಿದ ಮಹಾಮಹಿಮರು. ಆತನಿಂದ ಮತ್ತು ಆ ರಾಜಮನೆತನದ ಇತರರಿಂದಲೂ ಅನೇಕ ಜಹಗೀರುಗಳನ್ನೂ ವಿಶೇಷವಾದ ರಾಜಮರ್ಯಾದೆಯನ್ನೂ ಪಡೆದರೆಂದು ತಿಳಿದುಬರುತ್ತದೆ. ಅಂದು ಶ್ರೀಕೃಷ್ಣದೇವರಾಯನ ಕುಹುಯೋಗದ ನಿವಾರಣಾರ್ಥವಾಗಿ ಶ್ರೀವ್ಯಾಸರಾಯರು ರಾಜಸಿಂಹಾಸನದ ಮೇಲೆ ಕುಳಿತುದದಕ್ಕಾಗಿ ರಾಜನು ಅವರಿಗೆ ಬಿರುದಾವಳಿಗಳನ್ನಿತ್ತು ಸನ್ಮಾನಿಸಿದ ವಿಶೇಷ ಮರ್ಯಾದೆ ಇಂದಿಗೂ ಮಠದಲ್ಲಿ ನಡೆದುಕೊಂಡು ಬರುತ್ತಿದೆ. ಮುಳುಬಾಗಿಲಿನ ಮಠವು ಶ್ರೀಪಾದರಾಜರ ತರುವಾಯ ಶ್ರೀಪಾದರಾಜ ಮಠವೆಂದು ಹೇಗೆ ರೂಢಿಗೆ ಬಂದಿತೋ, ಶ್ರೀವ್ಯಾಸರಾಯರ ಅನಂತರ ಪ್ರಕೃತ ಮಠವೂ ಶ್ರೀವ್ಯಾಸರಾಯ ಮಠವೆಂದೇ ಸುಪ್ರಸಿದ್ಧಿಯಾಯಿತು. ಕಾಲಕ್ರಮೇಣದಲ್ಲಿ ಈ ಸಂಸ್ಥಾನವು ಸೋಸಲೆಯಲ್ಲಿ ನೆಲಸಿದುದರಿಂದ ಸೋಸಲೆಯ ಸಂಸ್ಥಾನವೆಂದೂ ಪ್ರಚಲಿತವಾಗಿದೆ. ಶ್ರೀವ್ಯಾಸರಾಯರು ಪ್ರಹ್ಲಾದಾಂಶರೆಂದು ಪ್ರತೀತಿ. ದ್ವೈತಸಿದ್ಧಾಂತ ಪ್ರಪಂಚದಲ್ಲಿ ಶ್ರೀ ವ್ಯಾಸರಾಯರ ಸ್ಥಾನ ಬಹಳ ಮಿಗಿಲಾದುದು.

## 3 ಶ್ರೀ ವಾದಿರಾಜರು

(ಕ್ರಿ.ಶ. 1480–1600) : ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಸೋದೆಯ ಮಠದ ಯತಿ ಪರಂಪರೆಯಲ್ಲಿ ಇಪ್ಪತ್ತನೆಯವರಾದ ಶ್ರೀ ವಾದಿರಾಜತೀರ್ಥರ ಪೂರ್ವಾಶ್ರಮದ ಹೆಸರು ಭೂವರಾಹ. ಶ್ರೀ ವಾಗೀಶತೀರ್ಥರು ತಮ್ಮ ಉತ್ತರಾಧಿಕಾರಿಯಾದ ಭೂವರಾಹನಿಗೆ ಶ್ರೀ ವಾದಿರಾಜತೀರ್ಥರೆಂದು ಹೆಸರಿತ್ತರು. ಆ ಹೆಸರಿಗೆ ತಕ್ಕಂತೆ ಶ್ರೀ ವಾದಿರಾಜರು ವಾದ ಮಾಡುವುದರಲ್ಲಿ ಅತ್ಯಂತ ಪ್ರವೀಣರೆನ್ನಿಸಿದರು. ಇವರ ಈ ವೈದುಷ್ಯವನ್ನು ಗಮನಿಸಿದ ವೆಂಕಟಪತಿರಾಜನು ಇವರಿಗೆ 'ಪ್ರಸಂಗಾಭರಣ ತೀರ್ಥ' ಎಂಬ ಬಿರುದನ್ನಿತ್ತು ಗೌರವಿಸಿದನು. ಶ್ರೀವಾದಿರಾಜರು ಸಂಸ್ಕೃತ ಮತ್ತು ಕನ್ನಡಗಳೆರಡರಲ್ಲಿಯೂ ಅಸೀಮವಾದ ಪಾಂಡಿತ್ಯವನ್ನು ಗಳಿಸಿದ್ದರು. ಸಂಸ್ಕೃತದಲ್ಲಿ ಇವರು ರಚಿಸಿದ 'ಯುಕ್ತಿ ಮಲ್ಲಿಕಾ' 'ಸರಸಭಾರತೀವಿಲಾಸ' 'ರುಕ್ಮಿಣೀಶ ವಿಜಯ' 'ತೀರ್ಥ ಪ್ರಬಂಧ' 'ದಶಾವತಾರ ಸ್ತೋತ್ರ' ಮೊದಲಾದುವು ಪಂಡಿತಮಾನ್ಯವಾಗಿವೆ. ಶ್ರೀವಾದಿರಾಜರು ಮತ್ತು ಶ್ರೀವ್ಯಾಸ ರಾಯರ ಸಾನ್ನಿಧ್ಯ ಬಲದಿಂದಲೋ ಎಂಬಂತೆ ಶ್ರೀವಾದಿರಾಜರು ಹರಿದಾಸ ಸಾಹಿತ್ಯಕ್ಕೆ ನೀಡಿರುವ ಕೊಡುಗೆಯಾದರೂ ಅಪೂರ್ವವೂ ಅತಿಶಯವೂ ಆದುದು. 'ಹಯವದನ' ಎಂಬ ಅಂಕಿತದಿಂದ ಇವರು ರಚಿಸಿರುವ ಕನ್ನಡದ ಕೀರ್ತನೆಗಳು ವಾಗ್ವಿಲಾಸದಿಂದ ಮನ ಸೆಳೆಯುವುವಲ್ಲದೆ, ನಿಡಿದಾದ ರಚನೆಗಳಲ್ಲಿ ಹುದುಗಿರುವ ತತ್ತ್ವಾಂಶಗಳಿಂದ ತುಂಬ ವಿಚಾರ ಪೂರ್ಣವೂ ಆಗಿದೆ. 'ವೈಕುಂಠ ವರ್ಣನೆ' 'ಸ್ವಪ್ನಪದ' 'ಗುಂಡಕ್ರಿಯೆ' 'ಹರಿಸರ್ವೋತ್ತಮ ಸಾರ' 'ಲಕ್ಷ್ಮೀಶೋಭಾನೆ' 'ಭ್ರಮರಗೀತೆ' ಮೊದಲಾದುವು ಶಾಸ್ತ್ರಗರ್ಭಿತವಾಗಿವೆ. ಇವರು ನೂರಿಪ್ಪತ್ತು ವರ್ಷಗಳ ಕಾಲ ಬದುಕಿದ್ದರು. ತಮ್ಮ ಕಾಲದಲ್ಲಿ ಉಡುಪಿಯ ಅಷ್ಟಮಠಗಳಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದರು. ಅವು ಇಂದಿಗೂ ನಡೆದುಕೊಂಡು ಬರುತ್ತಿವೆ. ಅರಸಪ್ಪ ನಾಯಕನು ತಮಗೆ ಬಳುವಳಿಯಾಗಿ ಕೊಟ್ಟ ಸೋದೆಯನ್ನು ಪವಿತ್ರ ತೀರ್ಥಕ್ಷೇತ್ರವನ್ನಾಗಿ ಪರಿವರ್ತಿಸಿದ ಪ್ರಶಸ್ತಿ ಇವರಿಗೆ ಸಲ್ಲತಕ್ಕದ್ದು. ಅಲ್ಲಿ ತ್ರಿವಿಕ್ರಮ ದೇವರನ್ನು ಪ್ರತಿಷ್ಠಿಸಿದುದಲ್ಲದೆ, ತಮ್ಮ ವೃಂದಾವನವನ್ನೂ ನಿರ್ಮಿಸಿ, ಕಡೆಗೆ ಸಶರೀರಿಗಳಾಗಿ ಅದನ್ನು ಪ್ರವೇಶಿಸಿದರು. ಇವರು ಲಾತವ್ಯ ನಾಮಕ ಋಜುವಿನ ಅವತಾರವೆಂದೂ, ಮುಂದೆ ಸಮೀರಪಟ್ಟವನ್ನು ಪಡೆಯುವರೆಂದೂ ಜನರಿಗೆ ಇವರಲ್ಲಿ ವಿಶೇಷವಾದ ಪೂಜ್ಯ ಭಾವನೆ.

## 4 ಪುರಂದರದಾಸರು

(ಕ್ರಿ. ಶ. 1484–1564): ಹರಿದಾಸವರೇಣ್ಯರೆಂದು ಹೆಸರುವಾಸಿಯಾಗಿರುವ

ಪುರಂದರದಾಸರ ಪೂರ್ವನಾಮ ಶ್ರೀನಿವಾಸನಾಯಕ. ಈತ ನವಕೋಟಿ ನಾರಾಯಣನೆನ್ನಿಸಿ ಅತ್ಯಂತ ಶ್ರೀಮಂತನಾಗಿದ್ದನು. ಈತನ ಹೆಂಡತಿಯ ಹೆಸರು ಸರಸ್ವತೀಬಾಯಿ. ಶ್ರೀನಿವಾಸನಾಯಕರು ಆಗರ್ಭ ಶ್ರೀಮಂತರಾಗಿದ್ದರೂ ತುಂಬ ಜಿಪುಣರಾಗಿದ್ದರು. ಆತನ ಪತ್ನಿ ಸರಸ್ವತೀಬಾಯಿಯಾದರೋ ಪರಮ ದೈವಭಕ್ತಳು. ಶ್ರೀನಿವಾಸನಾಯಕರಿಗೆ ಜ್ಞಾನೋದಯವನ್ನು ಉಂಟುಮಾಡಬೇಕೆಂಬ ಉದ್ದೇಶದಿಂದ ಭಗವಂತನು ಬಡಬ್ರಾಹ್ಮಣನ ವೇಷವನ್ನು ಧರಿಸಿ ಒಬ್ಬ ಹುಡುಗನೊಂದಿಗೆ ಕೂಡಿ, ತನ್ನ ಮಗನಿಗೆ ಬ್ರಹ್ಮೋಪದೇಶವನ್ನು ಮಾಡಿಸುವ ಸಲುವಾಗಿ ಧನಸಹಾಯ ಮಾಡಬೇಕೆಂದು ಶ್ರೀನಿವಾಸನಾಯಕರಲ್ಲಿ ಬಂದು ಯಾಚಿಸಿದನು. ಶ್ರೀನಿವಾಸನಾಯಕರು ತಮ್ಮ ಸ್ವಭಾವಕ್ಕೆ ಅನುಗುಣವಾಗಿ, ಆ ಬ್ರಾಹ್ಮಣನನ್ನು ಹಲವಾರು ಬಾರಿ ಅಲೆದಾಡಿಸಿ ಕಡೆಗೆ ಒಂದು ಸವಕಲು ನಾಣ್ಯವನ್ನು ಕೊಟ್ಟರು. ಖಿನ್ನನಾದ ಬಡಬ್ರಾಹ್ಮಣನು ಸರಸ್ವತೀಬಾಯಿಯಲ್ಲಿಗೆ ಬಂದು, ತನ್ನ ಮನೋಭಿಪ್ರಾಯವನ್ನು ತಿಳಿಸಿದನು. ಆಕೆಯ ಮನಸ್ಸು ಕರಗಿತು. ಮೊದಮೊದಲು ದಿಕ್ಕು ತೋಚದಂತಾಯಿತು. ಕಡೆಗೆ ತನ್ನ ತವರಿನವರು ತನಗೆ ಕೊಟ್ಟಿದ್ದ ಮುತ್ತಿನ ಮೂಗುತಿಯನ್ನು ಆ ಬ್ರಾಹ್ಮಣನಿಗೆ ಕೊಟ್ಟು ಕಳುಹಿಸಿದಳು. ವೇಷಧಾರಿಯಾದ ಆ ಬ್ರಾಹ್ಮಣನು ಆ ಒಡವೆಯನ್ನು ಅಡವಿಟ್ಟು ಹಣವನ್ನು ಪಡೆಯಲೆಂದು ಶ್ರೀನಿವಾಸನಾಯಕರಲ್ಲಿಗೇ ಬಂದನು. ಕುಶಾಗ್ರಮತಿಯಾದ ಶ್ರೀನಿವಾಸನಾಯಕರು, ಆ ಒಡವೆ ಯಾರದಿರಬಹುದೆಂದು ಊಹಿಸಿ, ಒಡನೆಯೇ ಮನೆಗೆ ಬಂದು, ನಿಜವೃತ್ತಾಂತವನ್ನು ತಿಳಿದು, ಹೆಂಡತಿಯನ್ನು ದಂಡಿಸಿದರು. ಆಕೆ ಅಸಹಾಯಕಳಾಗಿ ಪರಮಾತ್ಮನನ್ನು ಪ್ರಾರ್ಥಿಸಿದಳು. ಗಂಡನ ಆಗ್ರಹವನ್ನು ಎದುರಿಸಲಾಗದೆ, ತನ್ನ ಪ್ರಾಣವನ್ನೇ ತ್ಯಾಗಮಾಡಬೇಕೆಂದು ವಿಷವನ್ನು ಕುಡಿಯಲು ಬಟ್ಟಲನ್ನು ಮೇಲಕ್ಕೆ ಎತ್ತಿದಾಗ ಅದರಲ್ಲಿ ಆಕೆಯ ಮೂಗುತಿ ಬಿದ್ದಿದ್ದು ಗೋಚರಿಸಿತು. ಈ ಸೋಜಿಗವನ್ನು ಮನಗಂಡ ಶ್ರೀನಿವಾಸನಾಯಕರಿಗೆ ತಮ್ಮ ಅಜ್ಞಾನ ಸರಿದು, ಬಂದಾತ ಭಗವಂತನಿರಬೇಕೆಂದು ದೃಢವಾಯಿತು. ಆ ಕ್ಷಣವೇ ತಮ್ಮ ಆಸ್ತಿ ಪಾಸ್ತಿಗಳನ್ನೆಲ್ಲ ಶ್ರೀಕೃಷ್ಣಾರ್ಪಣವೆಂದು ದೇವರಿಗೆ ಸಲ್ಲಿಸಿ ವಿರಕ್ತರಾದರು. "ಆದದ್ದೆಲ್ಲ ಒಳಿತೇ ಆಯಿತು ನಮ್ಮ ಶ್ರೀಧರನ ಸೇವೆಗೆ ಸಾಧನ ಸಂಪತ್ತಾಯಿತು". ಎಂದು ಹಿಗ್ಗಿ ಹಾಡುತ್ತ ತಮಗೆ ಜ್ಞಾನೋದಯವನ್ನು ಉಂಟುಮಾಡಿದ ತಮ್ಮ ಹೆಂಡತಿಯನ್ನು ಮುಕ್ತ ಕಂಠದಿಂದ ಕೊಂಡಾಡಿದರು. ಅನಂತರ ಶ್ರೀವ್ಯಾಸರಾಯರಲ್ಲಿಗೆ ಹೋಗಿ "ಪುರಂದರ ವಿಠಲ" ಎಂಬ ಅಂಕಿತವನ್ನು ಪಡೆದು ತಮ್ಮ ಕೀರ್ತನ ಕೈಂಕರ್ಯವನ್ನು ಅತ್ಯಂತ ಉಜ್ವಲವಾಗಿ ನೆರವೇರಿಸಿದರು. ಶ್ರೀಪುರಂದರದಾಸರು ಸಾಧಿಸಿದ ಮಹತ್ಕಾರ್ಯವನ್ನು ಮೆಚ್ಚಿಕೊಂಡ ಶ್ರೀ ವ್ಯಾಸರಾಯರು ಅವರನ್ನು "ದಾಸರೆಂದರೆ ಪುರಂದರದಾಸರಯ್ಯ" ಎಂದು ಪ್ರಶಂಸಿಸಿದ್ದಷ್ಟೇ ಅಲ್ಲದೆ, ಅವರ ರಚನೆಗಳನ್ನು "ಪುರಂದರೋಪನಿಷತ್ತು" ಎಂದು ಗೌರವಿಸಿದರು. ಶ್ರೀ ಪುರಂದರದಾಸರು 4,75,000 ಕೃತಿಗಳನ್ನು ರಚಿಸಿದರೆಂದು ತಿಳಿದುಬರುತ್ತದೆ. ಈಗ ಉಪಲಬ್ಧವಾಗಿರುವ ಅವರ

ಕೀರ್ತನೆಗಳ ಸಮುದಾಯವನ್ನು ಸಮೀಕ್ಷಿಸಿದರೆ ಅವರ ಪ್ರಾಸಾದಿಕವಾಣಿಯ ವೈಭವವು ಸ್ವವಿದಿತವಾಗುತ್ತದೆ. ಅವರ ಕೃತಿಗಳಲ್ಲಿ ಸಾಹಿತ್ಯ, ಸಂಗೀತ ಮತ್ತು ಸ್ವಧರ್ಮ ನಿಷ್ಠೆಗಳ ತ್ರಿವೇಣೀ ಸಂಗಮವನ್ನು ಕಾಣಬಹುದು. ಅವರನ್ನು 'ಕರ್ಣಾಟಕ ಸಂಗೀತ ಪಿತಾಮಹ' ಎಂದು ಎಲ್ಲರೂ ಮನ್ನಿಸುವುದುಂಟು. ಸಮಗ್ರ ಹರಿದಾಸ ಸಾಹಿತ್ಯ ಪ್ರಪಂಚದ ಪ್ರತಿನಿಧಿ ಯಂತಿರುವ ಪುರಂದರದಾಸರನ್ನು "ಪುರಂದರ ಗುರುಂ ವಂದೇ ದಾಸಶ್ರೇಷ್ಠಂ ದಯಾನಿಧಿಂ" ಎಂದು ಹೊಗಳುವುದರಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ. ಪುರಂದರದಾಸರು ನಾರದಾಂಶರೆಂದು ಸುಪ್ರಸಿದ್ಧವಾಗಿರುವುದರಿಂದ ಅವರು ಭಕ್ತಿಸಂಪನ್ನರು, ಗಾನ ಲೋಲರು.

## 5. ಕನಕದಾಸರು

(ಕ್ರಿ. ಶ. 1507–1607): ಹರಿದಾಸ ಸಾಹಿತ್ಯ ಕ್ಷೇತ್ರದಲ್ಲಿ ಅಶ್ವಿನೀ ದೇವತೆಗಳಂತೆ ವಿರಾಜಿಸಿದವರೆಂದರೆ ಪುರಂದರದಾಸರು ಮತ್ತು ಕನಕದಾಸರು. ಇಬ್ಬರೂ ಶ್ರೀ ವ್ಯಾಸರಾಯರ ಅನುಗ್ರಹಕ್ಕೆ ಪಾತ್ರರಾದ ಶಿಷ್ಯರು. ಕನಕದಾಸರು ಜನ್ಮತಃ ಬ್ರಾಹ್ಮಣೇತರರಾದರೂ, ತಮ್ಮ ವೈಷ್ಣವ ಭಕ್ತಿಯ ಮೂಲಕ ಶ್ರೀ ವ್ಯಾಸರಾಯರ ಆದರವನ್ನು ಗಳಿಸಿದರು. ಧಾರವಾಡ ಜಿಲ್ಲೆಯಲ್ಲಿರುವ ಬಾಡದಲ್ಲಿ ಜನ್ಮ ತಾಳಿದ ಇವರು, ತಮ್ಮ ತಂದೆಯಂತೆಯೇ ಕೆಲವು ಕಾಲ ಡಣಾಯಕತನವನ್ನು ಅನುಭವಿಸಿ, ಅನಂತರ ಶ್ರೀ ವೆಂಕಟೇಶ್ವರನ ಪ್ರೇರಣೆಯ ಮೇರೆಗೆ ಹರಿದಾಸರಾದರು. ಇವರ ಬಾಲ್ಯನಾಮ ತಿಮ್ಮಪ್ಪನಾಯಕ. ತಮಗೆ ದೊರೆತ ನಿಧಿಯಿಂದ, ಕಾಗಿನೆಲೆಯ ನರಸಿಂಹ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದರು. ಬಾಡ ಗ್ರಾಮದಲ್ಲಿದ್ದ ಆದಿಕೇಶವ ಮೂರ್ತಿಯನ್ನು ತಂದು ಇಲ್ಲಿ ಪ್ರತಿಷ್ಠೆ ಮಾಡಿದರೆಂದು ತಿಳಿದು ಬರುತ್ತದೆ. ಈ ರೀತಿ ತಿಮ್ಮಪ್ಪನಾಯಕನಾಗಿದ್ದವನು ತನಗೆ ದೊರೆತ ನಿಧಿಯಿಂದ ದೇವಾಲಯವನ್ನು ಕಟ್ಟಿಸಿ, ಜನರ ಮನ್ನಣೆಯನ್ನು ಗಳಿಸಿ, ಕನಕನಾಯಕನೆಂಬ ಹೆಸರನ್ನು ಪಡೆದು, ಕಡೆಗೆ ಕನಕದಾಸರಾಗಿ ಮೆರೆದರು ಎನ್ನಬಹುದು. ಇವರು ತಮ್ಮ ರಚನೆಗಳಲ್ಲಿ ಬಾಡದಾದಿ ಕೇಶವ, ಕಾಗಿನೆಲೆಯಾದಿ ಕೇಶವ ಎಂಬ ಅಂಕಿತಗಳನ್ನು ಬಳಸಿರುತ್ತಾರೆ. ಇವರು ಶ್ರೀವೈಷ್ಣವ ಮತ ಪ್ರವರ್ತಕರಾದ ಶ್ರೀರಾಮಾನುಜಾಚಾರ್ಯರು ಮತ್ತು ವಿಜಯ ನಗರ ಕಾಲದಲ್ಲಿದ್ದ ತಾತಾಚಾರ್ಯರನ್ನು ಕೊಂಡಾಡಿರುವುದನ್ನು ಕಂಡರೆ ಮೊದಮೊದಲಿನಲ್ಲಿ ಇವರ ಮೇಲೆ ಶ್ರೀವೈಷ್ಣವ ಮತದ ಪ್ರಭಾವ ಹೇಗೆ ಬಿದ್ದಿತ್ತು ಎನ್ನುವುದು ವೇದ್ಯ ವಾಗುತ್ತದೆ. ಕನಕದಾಸರು ಕೀರ್ತನೆಗಳನ್ನು ಮಾತ್ರವಲ್ಲದೆ, 'ಮೋಹನ ತರಂಗಿಣಿ' 'ಹರಿಭಕ್ತಿಸಾರ' 'ನಳಚರಿತ್ರೆ' 'ರಾಮಧಾನ್ಯ ಚರಿತ್ರೆ' ಮೊದಲಾದ ಕಾವ್ಯಗಳನ್ನು ಬರೆದಿರು ತ್ತಾರೆ. ಇವರು ರಚಿಸಿರುವ 'ಮುಂಡಿಗೆಗಳು' ಹರಿದಾಸ ಸಾಹಿತ್ಯಕ್ಕೆ ವಿಶಿಷ್ಟವಾದ ಕೊಡುಗೆ ಎನ್ನಬಹುದು. ಅವುಗಳನ್ನು ಬಿಡಿಸುವುದು ಸುಲಭವೂ ಅಲ್ಲ. ಕನಕದಾಸರ ಕೀರ್ತನೆಗಳಲ್ಲಿ

ಕಂಡುಬರುವ ಕೆಚ್ಚು ಮೆಚ್ಚುವಂತಿದೆ. ಕನಕದಾಸರನ್ನು ಯಮಾಂಶರೆಂದೂ, ವಿದುರನ ಅವತಾರವೆಂದೂ ಭಾವಿಸುವುದುಂಟು.

## 6. ಮಹಿಪತಿರಾಯರು

(ಕ್ರಿ.ಶ. 1611–1681): ಕಾಖಂಡಿದಾಸರೆಂದು ಹೆಸರುವಾಸಿಯಾಗಿರುವ ಮಹಿಪತಿರಾಯರು ಬಿಜಾಪುರದ ಆದಿಲ್‌ಶಹನ [ಕ್ರಿ. ಶ. 1627–1655] ಆಸ್ಥಾನದಲ್ಲಿ ಒಳ್ಳೆಯ ಪದವಿಯಲ್ಲಿದ್ದು, ಅನಂತರ ಶಹಾಸುಂಗಾ ಮತ್ತು ಶಹಾನುಂಗೀ ಎಂಬ ಮಹಮ್ಮದೀಯ ವಿರಕ್ತರಿಂದ ಜ್ಞಾನೋದಯವಾಗಿ, ಸಾರವಾಡದಲ್ಲಿದ್ದ ಭಾಸ್ಕರಸ್ವಾಮಿಗಳೆಂಬ ಗುರುವಿನ ಅನುಗ್ರಹದಿಂದ ಜಾಗೃತಗೊಂಡು, ಹರಿದಾಸರಂತೆ ಜೀವನ ನಡೆಸಿ, ಅನೇಕ ಕೀರ್ತನೆಗಳನ್ನು ರಚಿಸಿರುವರು. ಇವರ ಮನೆತನದವರು ಉತ್ತರಾದಿ ಮಠಕ್ಕೆ ಸೇರಿದವರೆಂದು ರಾಯರ ಮಕ್ಕಳಾದ ಶ್ರೀಕೃಷ್ಣರಾಯರ ಕೀರ್ತನೆಯೊಂದರಿಂದ ಸುವ್ಯಕ್ತವಾಗುತ್ತದೆ. ಅವರ ಕೀರ್ತನೆಗಳಲ್ಲಿ ಈ ಮೊದಲು ಬದುಕಿ ಬಾಳಿದ ಪುರಂದರದಾಸರು, ಕನಕದಾಸರು ಮೊದಲಾದವರ ಪ್ರಭಾವವು ಕಾಣಬರುವುದಲ್ಲದೆ, ತಮ್ಮ ಗುರುವಿನ ಅನುಗ್ರಹದಿಂದ ತಮಗೆ ಆದ ಯೋಗಾನುಸಂಧಾನದ ದಿವ್ಯಾನುಭವದ ವಿವರಣೆಯೂ ಮೇಲಿಂದ ಮೇಲೆ ಕಂಡುಬರುತ್ತದೆ. ಹರಿದಾಸ ಸಾಹಿತ್ಯಕ್ಕೆ ಇದೊಂದು ಅಪೂರ್ವವಾದ ಕೊಡುಗೆ. ಮಹಿಪತಿರಾಯರು ಕೊಲ್ಹಾರವೆಂಬ ಎಡೆಯಲ್ಲಿ ದೈವಾಧೀನರಾದರೂ, ಅವರ ಆದೇಶದಂತೆ ಅವರ ವೃಂದಾವನವನ್ನು ಕಾಖಂಡಿಕಿಯಲ್ಲಿ ನಿರ್ಮಿಸಲಾಗಿದೆ. ಅವರ ಮಗನಾದ ಶ್ರೀಕೃಷ್ಣರಾಯರ ವೃಂದಾವನವೂ ಅಲ್ಲಿಯೇ ಇದೆ. ಪ್ರತಿ ವರ್ಷವೂ ಮಾರ್ಗಶಿರ ಮಾಸದಲ್ಲಿ ನಡೆಯುವ ಅವರ ಆರಾಧನೆಯ ಕಾಲದಲ್ಲಿ ಅವರ ವೃಂದಾವನದ ಬಳಿಯಲ್ಲಿ ಅವರು ಬಳಸುತ್ತಿದ್ದ ಪಾದುಕೆಗಳು ಮತ್ತು ಯೋಗದಂಡಗಳನ್ನು ಇಟ್ಟು ಪೂಜಿಸುವುದನ್ನು ಮನಗಂಡರೆ ರಾಯರು ಹೇಗೆ ಹರಿದಾಸರಾಗಿ ಬಾಳತೊಡಗಿ ಯೋಗಿಗಳಾಗಿ ತಮ್ಮ ಜೀವನವನ್ನು ಸಾರ್ಥಕಗೊಳಿಸಿದರೆನ್ನುವುದು ಸೂಚಿತವಾಗುತ್ತದೆ. ಇದೊಂದು ಅಪೂರ್ವ ಸಮನ್ವಯವೇ ಸರಿ. ಮಹಿಪತಿರಾಯರು ತಮ್ಮ ಕೀರ್ತನೆಯಲ್ಲಿ ಮಹಿಪತಿ, ತರಳಮಹಿಪತಿ, ಚಿಣ್ಣ ಮಹಿಪತಿ, ಬಾಲಕ ಮಹಿಪತಿ, ಕಂದ ಮಹಿಪತಿ, ದಾಸಮಹಿಪತಿ, ದೀನಮಹಿಪತಿ, ಮೂಢ ಮಹಿಮತಿ, ಮಹಿಪತಿ ಗುರು ಇದೇ ಮೊದಲಾದ ಅಂಕಿತಗಳನ್ನು ಬಳಸಿರುವರು. ಶ್ರೀಪಾದರಾಜರ ಕಾಲದಿಂದ ಪರಂಪರಾನುಗತಿಕವಾಗಿ ನಡೆದುಬಂದ ಹರಿದಾಸಸಾಹಿತ್ಯ, ವಿಜಯನಗರದ ಪತನದೊಂದಿಗೆ ತಟಸ್ಥವಾದಂತೆ ತೋರಿಬಂದರೂ ಅದನ್ನು ಗುಪ್ತಗಾಮಿನಿಯಂತೆ ರಕ್ಷಿಸಿಕೊಂಡು ಬಂದ ಶ್ರೇಯಸ್ಸು ಶ್ರೀ ಮಹಿಮತಿರಾಯರು ಮತ್ತು ಶ್ರೀ ಕೃಷ್ಣರಾಯರಿಗೆ ಸಲ್ಲತಕ್ಕದ್ದು.

## 7. ಶ್ರೀ ರಾಘವೇಂದ್ರತೀರ್ಥರು

(ಕ್ರಿ. ಶ. 1598-1671): ಶ್ರೀ ರಾಘವೇಂದ್ರ ತೀರ್ಥರು 'ವೇಣುಗೋಪಾಲ' ವೆಂಬ ಅಂಕಿತದಲ್ಲಿ ಗೋವಿಂದನ ದಯೆಯನ್ನು ಕೋರಿ ರಚಿಸಿದ ಒಂದೇ ಒಂದು ಕೀರ್ತನೆ ಇಂದು ನಮಗೆ ಉಪಲಬ್ಧವಾಗಿದ್ದರೂ, ಅವರ ಸ್ಮರಣೆಯಿಂದ ಪ್ರೇರಣೆಗೊಂಡು ಹರಿದಾಸ ರಾದ ವಿಜಯದಾಸರೇ ಮೊದಲಾದ ಇತರರನ್ನು ಕಂಡಾಗ, ಹರಿದಾಸಸಾಹಿತ್ಯದ ಪುನರುಜ್ಜೀವನಕ್ಕೆ ಅವರ ಪ್ರೇರಕಶಕ್ತಿಯ ಪ್ರಮಾಣವೆಷ್ಟೆಂಬುದೂ ಹರಿದಾಸಸಾಹಿತ್ಯದಲ್ಲಿ ಅವರ ಸ್ಥಾನ ಎಷ್ಟು ಮಹತ್ವಪೂರ್ಣವಾದುದೆನ್ನುವುದೂ ವ್ಯಕ್ತವಾಗುತ್ತವೆ. ವಿಜಯನಗ ರದ ಪತನಾನಂತರ ಮಹಮ್ಮದೀಯರಿಂದ ಆಕ್ರಾಂತವಾಗಿದ್ದ ನೆಲದಲ್ಲಿ ಪುನಃ ವೈದಿಕ ಧರ್ಮದ ಧ್ವಜಪತಾಕೆಯನ್ನು ಹಾರಿಸಿದ ಧವಳಕೀರ್ತಿ ಶ್ರೀ ರಾಘವೇಂದ್ರ ತೀರ್ಥರಿಗೆ ಹೇಗೆ ಸಲ್ಲುತ್ತದೆಯೋ ಅಂತೆಯೇ ಆ ಪ್ರದೇಶದಲ್ಲಿ ಅಳಿದುಳಿದ ವೈದಿಕ ಮತೀಯರಲ್ಲಿ ಧರ್ಮದ ಜಾಗೃತಿಯನ್ನು ತಿಳಿಗನ್ನಡದ ಮೂಲಕ ಉಂಟುಮಾಡಿದ ಶ್ರೇಯಸ್ಸು ಈ ಸ್ಥಳ ದಲ್ಲಿ ಬದುಕಿ ಬಾಳಿದ ಹರಿದಾಸರಿಗೆ ಸೇರಿದುದಾಗಿದೆ. ಈ ಸಂದಿಗ್ಧ ಕಾಲದಲ್ಲಿನ ಐತಿಹಾಸಿಕ ಮತ್ತು ಧಾರ್ಮಿಕ ಸಂಗತಿಗಳನ್ನು ಸಂಗ್ರಹಿಸಿದ್ದೇ ಆದರೆ ಈ ಅಂಶ ಮತ್ತಷ್ಟು ಮನವರಿಕೆ ಯಾಗುವುದು. ಶ್ರೀ ರಾಘವೇಂದ್ರ ತೀರ್ಥರ ಪೂರ್ವಾಶ್ರಮದ ನಾಮ ವೆಂಕಟನಾಥ. ಇವರು ಪ್ರಹ್ಲಾದಾಂಶರಾಗಿದ್ದ ಶ್ರೀ ವ್ಯಾಸರಾಯರ ಅವತಾರವೆಂದು ಗ್ರಹಿಕೆ.

## 8. ಶ್ರೀ ವಿಜಯದಾಸರು

(ಕ್ರಿ. 1687–1755) : ರಾಯಚೂರು ಜಿಲ್ಲೆಯ ಚೀಕಲಪರಿವೆಯಲ್ಲಿ ಜನ್ಮವೆತ್ತಿದ ಇವರ ಪೂರ್ವನಾಮ ದಾಸಪ್ಪ. ಚಿಕ್ಕಂದಿನಲ್ಲಿ ತುಂಬ ಬಡತನವನ್ನು ಅನುಭವಿಸಿದವರು. ಇವರನ್ನು 'ಕೂಸೀಮಗ ದಾಸ' ಎಂದು ಅಲಕ್ಷ್ಯದಿಂದ ಕರೆಯುತ್ತಿದ್ದರು. ದಾಸಪ್ಪ ದೂರದ ಕಾಶಿಗೆ ಹೋಗಿ, ಅಲ್ಲಿ ನೆಲಸಿರುವ ಕಾಲದಲ್ಲಿ ಒಮ್ಮೆ ವ್ಯಾಸ ಕಾಶಿಯಲ್ಲಿ ಇವರ ಸ್ವಪ್ನದಲ್ಲಿ ಪುರಂದರದಾಸರು ಕಾಣಿಸಿಕೊಂಡು ಇವರಿಗೆ 'ವಿಜಯವಿಠಲ' ಎಂಬ ಅಂಕಿತ ವನ್ನು ಕೊಟ್ಟರೆಂದು ಪ್ರತೀತಿ. ಅಂದಿನಿಂದ ಹರಿದಾಸರಾದ ವಿಜಯದಾಸರಿಗೆ ಶಾರದೆಯ ಕೃಪೆ ಒದಗಿತು. ತಮ್ಮ ಊರಿಗೆ ಹಿಂದಿರುಗಿ, ಹರಿದಾಸ ಕೈಂಕರ್ಯದಿಂದ ತಮ್ಮ ಜೀವನವನ್ನು ಸಾರ್ಥಕಗೊಳಿಸಲು ಆರಂಭಿಸಿದರು. ಇವರು ರಚಿಸಿರುವ ಕೀರ್ತನೆಗಳು ಎಷ್ಟೆಷ್ಟು ರಸಭರಿತ ವಾಗಿರುವುವೋ, ಇವರು ರಚಿಸಿದ ನೂರಾರು ಸುಳಾದಿಗಳು ಅಷ್ಟಷ್ಟೂ ಶಾಸ್ತ್ರಗರ್ಭಿತ ವಾಗಿರುವುವು. ವಿಜಯದಾಸರಿಗೆ ಸುಳಾದಿಗಳ ದಾಸರು ಎಂದೇ ಹೆಸರು. ಇವರ ನೇತೃತ್ವ ದಲ್ಲಿ ಹರಿದಾಸರ ಪರಂಪರೆ ಸುವ್ಯವಸ್ಥಿತವಾಗಿ ಮುಂದುವರಿಯಿತು. ಇವರ ಸಹೋದರ 'ಹಯವದನ ವಿಠಲ'ನೆಂಬ ಅಂಕಿತವನ್ನು ಪಡೆದರೆ, ಇವರ ಸಾಕುಮಗ 'ಮೋಹನವಿಠಲ'

ಎಂಬ ಅಂಕಿತದಿಂದ ಸುಪ್ರಸಿದ್ಧರಾದರು. ಇವರ ಶಿಷ್ಯವರ್ಗದಲ್ಲಿ ಗೋಪಾಲದಾಸರ ಹೆಸರು ತುಂಬ ದೊಡ್ಡದು. ಹರಿದಾಸ ಸಾಹಿತ್ಯ ಕ್ಷೇತ್ರಕ್ಕೇ ಕೀರ್ತಿಯನ್ನು ತಂದುಕೊಟ್ಟ ಜಗನ್ನಾಥದಾಸರು ವಿಜಯದಾಸರ ಪ್ರಶಿಷ್ಯರು. ವಿಜಯನಗರದ ವೈಭವ ಕಾಲದಲ್ಲಿ ಹರಿದಾಸ ಸಾಹಿತ್ಯದ ಸುವರ್ಣಯುಗ ವಿಜೃಂಭಿಸಿ, ಆ ತರುವಾಯ ಸ್ಥಗಿತವಾಗುವ ಹಂತದಲ್ಲಿ ರಲು, ಆ ಸಂಪ್ರದಾಯವನ್ನು ಆ ಹಿರಿಯರ ಹೆದ್ದಾರಿಯಲ್ಲಿಯೇ ಮುಂದುವರಿಸಿದ ಹಿರಿಮೆ ಶ್ರೀ ವಿಜಯದಾಸರಿಗೆ ಸಲ್ಲುತ್ತದೆ. ಇವರನ್ನು ಭೃಗುವಿನ ಅಂಶವುಳ್ಳವರೆಂದೂ ಪುರಂದರದಾಸರ ಮಕ್ಕಳಲ್ಲಿ ಒಬ್ಬನಾದ ಮಧ್ವಪತಿಯೇ, ತಂದೆಯ ಅಣತಿಯಂತೆ ಪುನಃ ಹುಟ್ಟಿ, ಅವರು ಮುಗಿಸದೆ ಬಿಟ್ಟಿದ್ದ 25000 ಕೃತಿಗಳನ್ನು ರಚಿಸಿದರೆಂದೂ ಆಸ್ತಿಕರ ಅಭಿಪ್ರಾಯ.

## 9. ಪಂಗನಾಮದ ತಿಮ್ಮಣ್ಣದಾಸರು

(ಕ್ರಿ. ಶ. 1750): ವಿಜಯದಾಸರ ಸಮಕಾಲೀನರಾದ ಇವರು, ಉನ್ನತ ಅಧಿಕಾರದಲ್ಲಿದ್ದರೂ, ಹರಿಭಕ್ತಿ ಪ್ರೇರಿತರಾಗಿ "ವೇಣುಗೋಪಾಲ ವಿಠಲ" ಎಂಬ ಅಂಕಿತದಿಂದ ಹರಿದಾಸ ದೀಕ್ಷೆಯನ್ನು ವಹಿಸಿದರು. ಇವರನ್ನು ಬೇಲೂರಿನ ವೈಕುಂಠದಾಸರ ಪುನರವತಾರವೆಂದು ವಿಜಯದಾಸರು ಮನಗಂಡು, ಇವರನ್ನು ಪಂಗನಾಮದ ತಿಮ್ಮಣ್ಣದಾಸರೆಂದು ಕರೆದರೆಂದು ತಿಳಿದುಬರುತ್ತದೆ.

## 10. ಪ್ರಸನ್ನ ವೆಂಕಟದಾಸರು

(ಕ್ರಿ. ಶ. 1680): ವಿಜಾಪುರದ ಜಿಲ್ಲೆಯಲ್ಲಿರುವ ಬಾಗಿಲುಕೋಟೆಗೆ ಸೇರಿದ ಈ ದಾಸರ ಪೂರ್ವನಾಮ ವೆಂಕಪ್ಪ. ಅಣ್ಣನ ಆಶ್ರಯದಲ್ಲಿದ್ದ ಇವರಿಗೆ ಅತ್ತಿಗೆಯ ಕಟುನುಡಿಯಿಂದ ವೈರಾಗ್ಯ ಉತ್ಪನ್ನವಾಗಿ ತಿರುಪತಿಗೆ ತೆರಳಿ, ಅಲ್ಲಿ ಶ್ರೀ ವೆಂಕಟೇಶ್ವರನ ಅನುಗ್ರಹವನ್ನು ಪಡೆದರು. 'ಪ್ರಸನ್ನ ವೆಂಕಟ' ಎಂಬ ಅಂಕಿತದಲ್ಲಿ ಅನೇಕ ದೇವರ ನಾಮಗಳನ್ನು ರಚಿಸಿರುವುದಲ್ಲದೆ, ಭಾಗವತ ದಶಮಸ್ಕಂಧದ ಪೂರ್ವಾರ್ಧದ ಭಾಗವನ್ನು ವಿವಿಧ ಮಟ್ಟುಗಳಲ್ಲಿ ಬಹಳ ಸ್ವಾರಸ್ಯವಾಗಿ ಅನುವಾದಿಸಿರುವರು. ಇದಲ್ಲದೆ, ಶ್ರೀಕೃಷ್ಣನ ಬಾಲಲೀಲೆಗಳನ್ನು ಚಿತ್ರಿಸುವಲ್ಲಿ ಬಾಲಭಾಷೆಯನ್ನೇ ಪ್ರಯೋಗಿಸಿರುವುದು ಇವರ ಒಂದು ವೈಶಿಷ್ಟ್ಯ.

## 11. ಗೋಪಾಲದಾಸರು

(ಕ್ರಿ. ಶ. 1721–1762): ಉತ್ತನೂರಿನ ವೆಂಕಟೇಶ್ವರನ ಪರಮಭಕ್ತರಾದ ಗೋಪಾಲದಾಸರ ಪೂರ್ವನಾಮ ಭಾಗಣ್ಣ. ಚಿಕ್ಕಂದಿನಲ್ಲಿಯೇ ತನ್ನ ತಂದೆಯನ್ನು

ಕಳೆದುಕೊಂಡ ಭಾಗಣ್ಣ ತನ್ನ ತಾಯಿ ಮತ್ತು ತಮ್ಮಂದಿರೊಂದಿಗೆ ನೆಲೆಯಿಲ್ಲದೆ ಬಹು ಕಷ್ಟಪಡಬೇಕಾಯಿತು. ಬ್ರಹ್ಮೋಪದೇಶವಾದ ಬಳಿಕ, ಗಾಯತ್ರಿ ಮಂತ್ರಬಲದಿಂದ ಭಾಗಣ್ಣನಿಗೆ ಭವಿಷ್ಯ ಹೇಳುವ ಶಕ್ತಿ ಪ್ರಾಪ್ತವಾಯಿತು. ಆಗ ಅವನ ಸ್ಥಿತಿಗತಿಗಳು ಸ್ವಲ್ಪ ಸುಧಾರಿಸಿದುವು. ಈ ಮಧ್ಯ ಭಾಗಣ್ಣನಿಗೆ ವಿಜಯದಾಸರ ಸಂದರ್ಶನವಾಗಲು ಅವರು ಈ ಮಹಾನುಭಾವನ ಸುಪ್ತ ಪ್ರತಿಭೆಯನ್ನು ಗುರುತಿಸಿ 'ಗೋಪಾಲವಿಠಲ' ಎಂಬ ಅಂಕಿತ ವನ್ನಿತ್ತು, ತಮ್ಮ ಆಪ್ತ ಶಿಷ್ಯನನ್ನಾಗಿ ಪರಿಗ್ರಹಿಸಿದರು. ಗೋಪಾಲದಾಸರ ಭಕ್ತಿಯ ಅತಿ ಶಯವನ್ನು ಅರಿತ ಜನರು ಅವರನ್ನು "ಭಕ್ತಿಯಲ್ಲಿ ಭಾಗಣ್ಣ" ಎಂದು ಗೌರವಿಸಲು ಆರಂಭಿ ಸಿದರು. ಗೋಪಾಲದಾಸರ ತಮ್ಮಂದಿರೂ, ಅಣ್ಣನಂತೆಯೇ ಹರಿದಾಸ ದೀಕ್ಷೆಯನ್ನು ಕೈಕೊಂಡರು. ಗೋಪಾಲದಾಸರು ರಚಿಸಿರುವ ಕೀರ್ತನೆಗಳು, ಉಗಾಭೋಗಗಳು ಮತ್ತು ಸುಳಾದಿಗಳು ವಿಜಯದಾಸರ ಮೇಲುಪಂಕ್ತಿಯನ್ನೇ ಅನುಸರಿಸಿವೆ ಎನ್ನಬಹುದು. ಇವರ ಜೀವನಚರಿತ್ರೆಯ ವಿಶೇಷ ಮಹತ್ವದ ಕಾರ್ಯವೆಂದರೆ, ವಿಜಯದಾಸರ ಆಜ್ಞಾನುಸಾರವಾಗಿ, ಶ್ರೀನಿವಾಸಾಚಾರ್ಯರಿಗೆ ಹರಿದಾಸ ದೀಕ್ಷೆಯನ್ನಿತ್ತು, ಅವರು ಪಂಢರಾಪುರದ ವಿಠಲನ ಅನುಗ್ರಹದಿಂದ 'ಜಗನ್ನಾಥವಿಠಲ' ಎಂಬ ಅಂಕಿತವನ್ನು ಪಡೆದು ಜಗನ್ನಾಥದಾಸರಾದುದು. ಜಗನ್ನಾಥದಾಸರಿಗೆ ಹರಿದಾಸದೀಕ್ಷೆಯನ್ನು ಕೊಟ್ಟದ್ದಲ್ಲದೆ, ಅವರಿಗೆ ತಮ್ಮ ಆಯುಷ್ಯದಲ್ಲಿ ನಲವತ್ತು ವರ್ಷಗಳನ್ನಿತ್ತು ಅವರ ಹರಿದಾಸ ಕೈಂಕರ್ಯ ನಿರ್ವಿಘ್ನವಾಗಿ ನೆರವೇರುವಂತೆ ಮಾಡಿದ್ದು ಮತ್ತಷ್ಟು ಪ್ರಶಂಸನೀಯವಾದ ಸಂಗತಿ. ವೇಣೀಸೋಮಪುರದ ವೆಂಕಟ ರಾಮಾಚಾರ್ಯರು ಗೋಪಾಲದಾಸರ ಪ್ರೀತಿ ವಿಶ್ವಾಸಗಳನ್ನು ಗಳಿಸಿ, ವ್ಯಾಸತತ್ವಜ್ಞರೆಂಬು ದಾಗಿ ಮೆರೆದುದು ಮತ್ತೊಂದು ದಿವ್ಯ ಘಟನೆ. ಗೋಪಾಲದಾಸರು ಗಣಪತಿಯ ಅಂಶ ವನ್ನುಳ್ಳವರೆಂದು ಪ್ರತೀತಿ.

## 12. ಜಗನ್ನಾಥದಾಸರು

(ಕ್ರಿ. ಶ. 1728–1809): ಇವರ ಪೂರ್ವನಾಮ ಶ್ರೀನಿವಾಸಾಚಾರ್ಯ. ಇವರ ಜನ್ಮಸ್ಥಳ ಮಾನವಿಯ ತಾಲ್ಲೂಕಿನಲ್ಲಿರುವ ಬ್ಯಾಗವಟ್ಟ ಎಂಬುದಾದರೂ, ಇವರ ಕಾರ್ಯ ಕ್ಷೇತ್ರವೆಲ್ಲ ಮಾನವಿಯೇ ಆದುದರಿಂದ ಇಂದಿಗೂ ಅದು ಪವಿತ್ರ ಕ್ಷೇತ್ರವೆನ್ನಿಸಿದೆ. ಶ್ರೀನಿವಾಸಾಚಾರ್ಯರು ಸಂಸ್ಕೃತದಲ್ಲಿ ಅಸೀಮವಾದ ಪಾಂಡಿತ್ಯವನ್ನು ಗಳಿಸಿ ತಮ್ಮ ಸಮ ಕಾಲೀನರಾವ ವರದೇಂದ್ರಸ್ವಾಮಿಗಳ ಪ್ರೀತಿಗೆ ಪಾತ್ರರಾದರು. ಕಾರಣಾಂತರದಿಂದ ಇವರಿಗೆ ಹರಿದಾಸ ಸಾಹಿತ್ಯದತ್ತ ಸಾಕಷ್ಟು ಆಸಕ್ತಿ ಇರಲಿಲ್ಲ. ಆದರೆ, ದೈವಚಿತ್ತ ಅತ್ಯಂತ ಆಶ್ಚರ್ಯಕರವಾದುದು. ಶ್ರೀ ವಿಜಯದಾಸರನ್ನು ಅಲಕ್ಷಿಸಿದುದರಿಂದಲೋ ಏನೋ ಇವರಿಗೆ ಅಸಾಧ್ಯವಾದ ಉದರಶೂಲೆ ಮೊದಲಾಯಿತು. ಎಲ್ಲಿ ಹೋದರೂ ಗುಣವಾಗಲಿಲ್ಲ. ಕಡೆಗೆ ಅಪರೋಕ್ಷಜ್ಞಾನಿಗಳಾದ ವಿಜಯದಾಸರನ್ನು ಮರೆಹೊಕ್ಕರು. ವಾಸ್ತವ ಸಂಗತಿ

ಯನ್ನು ಗ್ರಹಿಸಿದ ಅವರು, ಶ್ರೀನಿವಾಸಾಚಾರ್ಯರನ್ನು ತಮ್ಮ ಆಪ್ತ ಶಿಷ್ಯರಾದ ಗೋಪಾಲ ದಾಸರ ಬಳಿಗೆ ಕಳುಹಿಸಿದರು. ಅವರು ಗುರುವಿನ ಇಂಗಿತವನ್ನರಿತು, ತಮ್ಮ ತೇಜೋಬಲ ದಿಂದ ಶ್ರೀನಿವಾಸಾಚಾರ್ಯರ ರೋಗವನ್ನು ಪರಿಹರಿಸಿದುದಲ್ಲದೆ ಅವರಿಗೆ ಹರಿದಾಸದೀಕ್ಷೆ ಯನ್ನಿತ್ತು ಉದ್ಧಾರ ಮಾಡಿದರು. ಪಾಂಡುರಂಗನಿಂದ ಅಂಕಿತವನ್ನು ಪಡೆದ ಶ್ರೀನಿವಾಸಾ ಚಾರ್ಯರು ಅಂದಿನಿಂದ ಜಗನ್ನಾಥದಾಸರೆಂಬ ಹೆಸರಿನಿಂದ ಎಲ್ಲರ ಆದರಕ್ಕೂ ಪಾತ್ರರಾದರು. ಅವರು ತಮ್ಮ ಕೀರ್ತನೆಯಲ್ಲಿ ವಿಜಯದಾಸರನ್ನು ಹೃತ್ಪೂರ್ವಕವಾಗಿ ಹೊಗಳಿ ಆನಂದ ಪಟ್ಟಿರುತ್ತಾರೆ. ಅತ್ಯಂತ ಅರ್ಥಗರ್ಭಿತವಾದ ಕೀರ್ತನೆಗಳನ್ನು ರಚಿಸಿರುವುದಷ್ಟೇ ಅಲ್ಲದೆ, ದ್ವೈತಸಿದ್ಧಾಂತದ ಸಾರದಂತಿರುವ "ಹರಿಕಥಾಮೃತಸಾರ"ವನ್ನು ಭಾಮಿನೀಷಟ್ಪದಿಯಲ್ಲಿ ರಚಿಸಿ ಭಗವದ್ಭಕ್ತರಿಗೆ ಮಹೋಪಕಾರ ಮಾಡಿರುತ್ತಾರೆ. "ತತ್ತ್ವಸುವ್ವಾಲಿ" ಎಂಬ ತ್ರಿಪದಿಗಳಲ್ಲಿ ಶಾಸ್ತ್ರ ಸಂಗತಿಗಳನ್ನು ಅತ್ಯಂತ ಸರಳವಾಗಿ ಸಾರಿ ಹೇಳಿರುತ್ತಾರೆ. ಜಗನ್ನಾಥ ದಾಸರನ್ನು ಸಹ್ಲಾದರ ಅಂಶವೆಂದು ಪೂಜಿಸುವುದುಂಟು. ಹರಿದಾಸ ಚತುಷ್ಟಯರೆಂದು ಪರಿಗಣಿತರಾಗಿರುವ ಪುರಂದರದಾಸರು, ವಿಜಯದಾಸರು, ಗೋಪಾಲದಾಸರು ಮತ್ತು ಜಗನ್ನಾಥದಾಸರು ಎಂಬ ಮಾಲಿಕೆಯಲ್ಲಿ ಇವರೂ ಸೇರಿರುವುದನ್ನು ಕಂಡರೆ ಅವರ ಮಹಿಮೆ ಯನ್ನು ಇನ್ನು ಹೆಚ್ಚಾಗಿ ಬೆಳೆಸುವ ಅಗತ್ಯವಿಲ್ಲ.

## 13. ಶ್ರೀ ವ್ಯಾಸತತ್ತ್ವಜ್ಞರು

(ಕ್ರಿ.ಶ.ಸು.1762): ಗೋಪಾಲದಾಸರ ಸಮಕಾಲೀನರಾದ ವ್ಯಾಸತತ್ತ್ವಜ್ಞರ ಪೂರ್ವಾ ಶ್ರಮನಾಮ ಐಜಿ ವೆಂಕಟರಾಮಾಚಾರ್ಯ. ಇವರ ಸ್ಥಳ ಐಜಿ. ಇವರ ತಂದೆ ವೆಂಕಟನರಸಿಂಹಾ ಚಾರ್ಯರು ದೊಡ್ಡ ಪಂಡಿತರೆನ್ನಿಸಿದ್ದರು. ತಮ್ಮ ಮಗನಿಗಾದರೋ ವಿದ್ಯೆಯಲ್ಲಿ ಆಸಕ್ತಿಯಿಲ್ಲ ದುದನ್ನು ಕಂಡು ತಂದೆಗೆ ತುಂಬ ವ್ಯಾಕುಲವಾಯಿತು. ಆಗ ತಮ್ಮ ಹೆಂಡತಿಯ ಸಲಹೆಯ ಮೇರೆಗೆ ಗೋಪಾಲದಾಸರ ಬಳಿಗೆ ಹೋಗಿ ವಿಚಾರಿಸಿದರು. ಹರಿದಾಸರು ಆತ ಸಕಾಲದಲ್ಲಿಯೇ ದೊಡ್ಡ ಪಂಡಿತನಾಗುವುದರಲ್ಲಿ ಸಂಶಯವಿಲ್ಲವೆಂದು ಭರವಸೆಯಿತ್ತರು. ಗೋಪಾಲದಾಸರ ಮಾತು ಸುಳ್ಳಾಗಲಿಲ್ಲ. ಆನತಿ ಕಾಲದಲ್ಲಿಯೇ ವೆಂಕಟರಾಮಾಚಾರ್ಯರು ದೊಡ್ಡ ಪಂಡಿತ ರಾದರು. ಅವರಿಗಾದರೋ ತಾವು ಎಷ್ಟೇ ಜ್ಞಾನಿಗಳಾದರೂ, ಗೋಪಾಲದಾಸರಂತೆ ಅಪರೋಕ್ಷಜ್ಞಾನಾನುಭವವಾಗಲಿಲ್ಲವೆಂದು ಯಾತನೆ ಹಿಡಿಯಿತು. ಅನಂತರ ಅದು ಅವರಿಗೆ ಪುನರ್ಜನ್ಮದಲ್ಲಿ ಮಾತ್ರವೇ ಲಭ್ಯವೆಂದು ಗೋಪಾಲದಾಸರಿಂದ ತಿಳಿದುಬಂದಿತು. ಆಗ ವೆಂಕಟರಾಮಾಚಾರ್ಯರು ಮಂತ್ರಾಲಯಮಠದ ಪೀಠಾಧಿಪತಿಗಳಾಗಿದ್ದ ಶ್ರೀ ಭುವ ನೇಂದ್ರರಲ್ಲಿಗೆ ಹೋಗಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ, ಶ್ರೀವ್ಯಾಸ ತತ್ತ್ವಜ್ಞರೆಂಬ ಅಭಿಧಾನವನ್ನು ಪಡೆದರು. ಅನಂತರ ಅವರಿಗೆ ಅಪರೋಕ್ಷಾನುಭವವಾಗಲು, ಕನ್ನಡ ದಲ್ಲಿ ಅನೇಕ ಕೀರ್ತನೆಗಳನ್ನೂ ಸುಳಾದಿಗಳನ್ನೂ "ವಾಸುದೇವವಿಠಲ" ಎಂಬ ಅಂಕಿತದಲ್ಲಿ

ರಚಿಸಿದರು. ಇವರ ಕೀರ್ತನೆಗಳಲ್ಲಿ ವ್ಯಕ್ತವಾಗುವ ಮಧುರಭಾವ, ಹೆಸರಿಗೆ ತಕ್ಕಂತೆ ಮನೋಜ್ಞವಾಗಿದೆ. ಶ್ರೀವ್ಯಾಸತತ್ವಜ್ಞರು ಸಂಸ್ಕೃತದಲ್ಲಿಯೂ ಅನೇಕ ಕೃತಿಗಳನ್ನು ರಚಿಸಿರುವರು. ಅಂದಿನ ಕಾಲದಲ್ಲಿ ಗದ್ವಾಲಿನ ರಾಜನಾಗಿದ್ದ ರಾಜಾ ರಾಮಭೂಪಾಲನು ಇವರಿಗೆ ಅನೇಕ ಜಹಗೀರುಗಳನ್ನು ಕೊಟ್ಟು ಗೌರವಿಸಿದ್ದನು. ಶ್ರೀವ್ಯಾಸತತ್ವಜ್ಞರು ತುಂಗಭದ್ರಾ ತೀರದಲ್ಲಿರುವ ವೇಣೀಸೋಮಪುರದಲ್ಲಿ ನೆಲಸಿ, ಅಲ್ಲಿ ತಮ್ಮ ದೈವಕಾರ್ಯ ಮತ್ತು ಕೀರ್ತನ ಕೈಂಕರ್ಯದಲ್ಲಿ ನಿರತರಾಗಿದ್ದರು. ಅವರು ಪಾಠ ಪ್ರವಚನಗಳನ್ನು ನಡೆಸುತ್ತಿದ್ದ ಶ್ರೀ ವೇಣುಗೋಪಾಲನ ಗುಡಿ ಇಂದಿಗೂ ಇಲ್ಲಿ ಶೋಭಿಸುತ್ತಿದೆ. ಅವರ ವೃಂದಾವನವೂ ಇಲ್ಲಿಯೇ ಇದೆ. ಶ್ರೀ ವ್ಯಾಸತತ್ವಜ್ಞರು ದ್ಯುಪ್ಟದ್ಯುಮ್ನನ ಅಂಶವೆಂದು ಪ್ರತೀತಿ.

## 14. ಹೆಳವನಕಟ್ಟೆ ಗಿರಿಯಮ್ಮ

(ಕ್ರಿ.ಶ. 1750) : ಹರಿದಾಸಸಾಹಿತ್ಯ ಪ್ರಪಂಚದಲ್ಲಿ ಹರಿಭಕ್ತೆಯರ ಸಂಖ್ಯೆ ತುಂಬ ವಿರಳ. ಈಕೆಯ ತವರೂರು ರಾಣೀಬೆನ್ನೂರು. ಗಂಡನ ಮನೆ ಇದ್ದದ್ದು ಹರಿಹರ ತಾಲ್ಲೂಕಿನಲ್ಲಿರುವ ಮಲೆಬೆನ್ನೂರಿನಲ್ಲಿ. ಮದುವೆಯಾದಾಗಿನಿಂದ ಈಕೆ ಪರಮ ವಿರಕ್ತಳಂತೆಯೇ ಇದ್ದು ಸರ್ವದಾ ದೈವಧ್ಯಾನದಲ್ಲಿಯೇ ನಿರತಳಾಗಿದ್ದಳು. ಈಕೆ ಮಲೆ ಬೆನ್ನೂರಿನ ಸಮೀಪದಲ್ಲಿದ್ದ ಕೊಮಾರನ ಹಳ್ಳಿಯ ದಿಬ್ಬದ ಮೇಲಿದ್ದ ಹೆಳವನಕಟ್ಟೆ ರಂಗ ನಾಥನ ಭಕ್ತಳಾಗಿದ್ದಳು. ರಂಗವಲ್ಲಿಯನ್ನು ಹಾಕುವುದರಲ್ಲಿ ನಿಪುಣಳಾಗಿದ್ದುದರಿಂದ, ಪ್ರತಿನಿತ್ಯವೂ ಗುಡಿಗೆ ಹೋಗಿ ಬಗೆಬಗೆಯಾದ ರಂಗವಲ್ಲಿಯನ್ನು ಹಾಕಿ, ದೇವರಸೇವೆ ಮಾಡುತ್ತಿದ್ದಳು. ಕೆಲಕಾಲದ ಬಳಿಕ ತನ್ನ ಪತಿಗೆ ಬೇರೊಂದು ಮದುವೆಯ ವ್ಯವಸ್ಥೆಯನ್ನು ಮಾಡಿ, ತಾನುದೇವರ ಸೇವೆಯಲ್ಲಿ ತತ್ಪರಳಾಗಿದ್ದಳು. ಒಮ್ಮೆ, ಗೋಪಾಲದಾಸರು ಆ ಊರಿನ ಕಡೆ ಬಂದಾಗ, ಗಿರಿಯಮ್ಮನು ಹಾಕಿದ್ದ ರಂಗವಲ್ಲಿಯನ್ನು ಕಂಡು ಮನವಾರೆ ಮೆಚ್ಚಿ ಆಕೆ ಯನ್ನು ಹೃತ್ಪೂರ್ವಕವಾಗಿ ಆಶೀರ್ವದಿಸಿದರು. ಹೀಗೆಯೇ ಈಕೆ ತನ್ನ ಭಕ್ತಿಮಹತ್ವದಿಂದ ಅಂದಿನ ಕಾಲದಲ್ಲಿ ಪೀಠಸ್ಥರಾಗಿದ್ದ ಮಂತ್ರಾಲಯದ ಶ್ರೀಗಳವರ ಅನುಗ್ರಹಕ್ಕೂ ಪಾತ್ರ ಳಾದಳು. ಈಕೆಯಲ್ಲಿ ಸುಪ್ತವಾಗಿದ್ದ ದೈವಭಕ್ತಿ ಪ್ರವರ್ಧಿಸಿ 'ಹೆಳವನಕಟ್ಟೆ ರಂಗ' ಎಂಬ ಅಂಕಿತದಲ್ಲಿ ಕೀರ್ತನೆಗಳನ್ನು ಬರೆಯಲು ಆರಂಭಿಸಿದಳು. ಇಷ್ಟೇ ಅಲ್ಲದೆ ಚಿಕ್ಕ ಚಿಕ್ಕ ಸಾಂಗತ್ಯ ಕೃತಿಗಳನ್ನೂ ರಚಿಸಿದಳು. ಇವುಗಳಲ್ಲಿ "ಚಂದ್ರಹಾಸನ ಸಾಂಗತ್ಯ" ಎಂಬುದು ತುಂಬ ಜನಪ್ರಿಯವಾಗಿದೆ. ಈಕೆಯ ಭಕ್ತಿ ಪಾರವಶ್ಯವನ್ನು ಕಂಡ ಜನರು, ಈಕೆ ಯಶೋ ದೆಯ ಅವತಾರವೆಂದು ಎಣಿಸಿರುವುದುಂಟು.

## 15. ಶ್ರೀದವಿಠಲದಾಸರು

ಕ್ರಿ.ಶ.ಸು. 1800) : ಜಗನ್ನಾಥದಾಸರ "ಹರಿಕಥಾಮೃತಸಾರ"ಕ್ಕೆ ಫಲಸ್ತುತಿ

ಯನ್ನು ಬರೆದಿರುವ ಶ್ರೀದವಿಠಲದಾಸರ ಪೂರ್ವನಾಮ ಕರ್ಜಗಿ ದಾಸಪ್ಪ. ಇವರು ವಿದ್ಯಾವಂತರಾದಾಗ್ಯೂ ವೇಶ್ಯಾಲೋಲರಾಗಿದ್ದರು. ಒಮ್ಮೆ, ಇವರ ಮನೆಯಲ್ಲಿ ಜಗನ್ನಾಥ ದಾಸರು ಕೀರ್ತನೆ ಮಾಡುವ ಸಂದರ್ಭದಲ್ಲಿ, ಪ್ರಾಣೇಶದಾಸರು ಹೇಳಿದ ಒಂದು ಕೀರ್ತನೆ ಯಿಂದ ದಾಸಪ್ಪನ ಮನಸ್ಸು ಸಂಪೂರ್ಣವಾಗಿ ಮಾರ್ಪಟ್ಟಿತು. ಅಂದಿನಿಂದ ಅವರು ಜಗನ್ನಾಥದಾಸರ ಅನುಗ್ರಹಕ್ಕೆ ಪಾತ್ರರಾಗಿ, 'ಶ್ರೀದವಿಠಲ' ಎಂಬ ಅಂಕಿತವನ್ನು ಪಡೆದು ಹರಿದಾಸ ಕೈಂಕರ್ಯವನ್ನು ನಡೆಸಿಕೊಂಡು ಬಂದರು. ವರದಾನದಿಯ ತೀರದಲ್ಲಿರುವ ಕರ್ಜಗಿಯಲ್ಲಿ ನೆಲಸಿದ್ದಾಗಲೇ ಜಗನ್ನಾಥದಾಸರು ತಮ್ಮ ಮೇರುಕೃತಿಯಾದ 'ಹರಿಕಥಾಮೃತ ಸಾರ'ವನ್ನು ಬರೆದು ಮುಗಿಸಿ, ಅದಕ್ಕೆ ಫಲಸ್ತುತಿಯನ್ನು ಬರೆಯುವಷ್ಟರಲ್ಲಿ, ಆ ಕೆಲಸ ಅವರ ಶಿಷ್ಯನಿಂದ ಆಗುವುದೆಂದು ಅಶರೀರವಾಣಿಯಾಯಿತು. ಅದೇ ಮೇರೆಗೆ, ಕರ್ಜಗಿ ದಾಸರಾದ ಶ್ರೀದವಿಠಲರಿಂದ ಈ ಕಾರ್ಯ ನೆರವೇರಿತು.

---

## ಆಧಾರ ಗ್ರಂಥಗಳು


1. ಶ್ರೀ ಕರ್ಣಾಟಕ ಭಕ್ತ ವಿಜಯ, ಮೂರನೆಯ ಮುದ್ರಣ (1963) : ಬೇಲೂರು ಕೇಶವದಾಸರು
2. ಹರಿದಾಸರ ಕಥೆಗಳು (1959) : ಕಲಮದಾನಿ ಗುರುರಾಯರು
3. ಶ್ರೀ ಹರಿಭಕ್ತ ವಿಜಯ, ಭಾಗ ೧ (1968) : ಗುರುಗೋವಿಂದ ವಿಠಲದಾಸರು

